॥ ಶ್ರೀ ॥

# ವರ್ಣವ್ಯವಸ್ಥೆ

ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ
ವೃತ್ತಿ ಪಂಡಿತರಾದ ವ್ಯಾಕರಣ ವಿದ್ವಾನ್ ಎಂ. ಕೆ.
ಶ್ರೀನಿವಾಸ ರಾಘವಾಚಾರ್ಯರಿಂದ ರಚಿಸಲ್ಪಟ್ಟು
ಪ್ರಚಾರ ಪಡಿಸಲ್ಪಟ್ಟಿತು.

ಜಯಾಲಯ ಪ್ರೆಸ್
ಮೈಸೂರು.
1923

ಬೆಲೆ 0-2-0]

# ವರ್ಣವ್ಯವಸ್ಥೆ

ಸೃಷ್ಟಿಯ ಆರಂಭ ಕಾಲದಿಂದಲೂ ಜನ್ಮ, ಗುಣ, ಕರ್ಮ, ಇವುಗಳ ಆಧಾರದ ಮೇಲೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ನಾಲ್ಕು ವರ್ಣಗಳು ವ್ಯವಸ್ಥಿತವಾಗಿರುವವು, ಅಂದರೆ ಬ್ರಾಹ್ಮಣ ಸ್ತ್ರೀಯಲ್ಲಿ ಬ್ರಾಹ್ಮಣನಿಗೂ, ಕ್ಷತ್ರಿಯ ಸ್ತ್ರೀಯಲ್ಲಿ ಕ್ಷತ್ರಿಯನಿಗೂ, ವೈಶ್ಯ ಸ್ತ್ರೀಯಲ್ಲಿ ವೈಶ್ಯನಿಗೂ, ಶೂದ್ರ ಸ್ತ್ರೀಯಲ್ಲಿ ಶೂದ್ರನಿಗೂ ಉತ್ಪನ್ನವಾದ ಸಂತಾನವು ಆಯಾ ಗುಣವನ್ನು ಹೊಂದಿ ಆಯಾಯ ಕರ್ಮಗಳಲ್ಲಿ ಪ್ರವೃತ್ತವಾಗಿ ಬ್ರಾಹ್ಮಣನೆಂತಲೂ ಕ್ಷತ್ರಿಯನೆಂತಲೂ ವೈಶ್ಯನೆಂತಲೂ ಶೂದ್ರನೆಂತಲೂ ವ್ಯವಹರಿಸಲ್ಪಡುವುದು.

ಈ ವಿಷಯದಲ್ಲಿ ಕೆಲವರು ಗುಣಕರ್ಮಗಳಿಂದ ಬ್ರಾಹ್ಮಣಾದಿ ವ್ಯವಹಾರವೇ ಹೊರತು ಜನ್ಮದಿಂದಲ್ಲವೆಂದು ವಾದಿಸುವರು. ಇದಕ್ಕೆ ಕೆಲವು ಪ್ರಮಾಣಗಳನ್ನು ಅವರು ಉದಹರಿಸುವರು. ಒಬ್ಬ ಬ್ರಾಹ್ಮಣನು ಶೂದ್ರ ಕರ್ಮದಲ್ಲಿ ನಿರತನಾಗಿ ಸ್ವವರ್ಣೋಚಿತಕರ್ಮಗಳಲ್ಲಿ ವಿಮುಖನಾದರೆ, ಧಾರ್ಮಿಕನಾದ ರಾಜನು ಅವರನ್ನು ಶೂದ್ರ ಕರ್ಮದಲ್ಲಿ ನೇಮಿಸಬೇಕೆಂದು ಶಾಸ್ತ್ರವು ಹೇಳುವದು. ಇತಿಹಾಸಗಳಲ್ಲಿ ಕೆಲವೆಡೆಗಳಲ್ಲಿ ಗುಣಕರ್ಮಗಳನ್ನನುಸರಿಸಿ ವರ್ಣವಿಭಾಗವನ್ನು ತೋರಿಸಿರುವಂತೆ ಭಾಸಮಾನವಾಗುವದು. ವಿಶ್ವಾಮಿತ್ರನು ಜನ್ಮದಿಂದ ಕ್ಷತ್ರಿಯನಾಗಿದ್ದಾಗ್ಯೂ ಕರ್ಮದಿಂದ ಬ್ರಾಹ್ಮಣನಾಗಿರುವನು. ಆದುದರಿಂದ ಗುಣಕರ್ಮಗಳಿಂದ ವರ್ಣವ್ಯವಸ್ಥೆಯೇ ಹೊರತು ಜನ್ಮದಿಂದಲ್ಲವೆಂದು ಇವರ ಅಭಿಪ್ರಾಯವಾಗಿರುವದು, ಆದರೂ ಆಚರಣೆಯಲ್ಲಿಮಾತ್ರ ಹಾಗಿಲ್ಲ. ವಂಶ ಪರಂಪರೆಯಲ್ಲಿಯೇ ವರ್ಣವ್ಯವಸ್ಥೆಯು ಇರುವದು. ಇದಕ್ಕೆ ಕಾರಣವೇನು ? ನಾವು ಇದುವರೆಗಿನ ಆಚಾರದಂತೆ ಜನ್ಮಾನುಸಾರ ಬ್ರಾಹ್ಮಣಾದಿಗಳನ್ನು ಒಪ್ಪಬೇಕೆ ? ಗುಣಕರ್ಮಗಳಿಗನುಸಾರವಾಗಿ ಒಪ್ಪಬೇಕೇ ? ಎಂಬ ಸಂಶಯವು ಸಹಜವಾಗಿಯೇ ಎಲ್ಲರಿಗೂ ಉಂಟಾಗುವದು.

ಈಗಿನ ಜನಗಳಿಗೆ ಈ ಕಾಲಕ್ಕನುಸಾರವಾಗಿ ಒದಗುವ ಶಿಕ್ಷಾಕ್ರಮಗಳಿಂದ ಮಹರ್ಷಿಗಳ ಧರ್ಮರಹಸ್ಯವು ತಿಳಿದುಬರುವದು ಬಹಳ ಕಷ್ಟವಾಗಿದೆ. ಜನ್ಮ, ಗುಣ, ಕರ್ಮ, ಇವು ಮೂರನ್ನು ಅನುಸರಿಸಿಯೇ ವರ್ಣವ್ಯವಸ್ಥೆಯನ್ನು ಮಾಡಬೇಕು. ಇತಿಹಾಸವೂ ಇದನ್ನೇ ಹೇಳುವದು. ಇದೇ ಸರ್ವಸಮ್ಮತವಾ

ದದ್ದು. ಗುಣಕರ್ಮಗಳ ವಿಷಯದಲ್ಲಿ ಮಾತ್ರ ಸ್ವಲ್ಪ ವಿಚಾರಮಾಡಬೇಕಾದ್ದು ಅವಶ್ಯಕ. ಈಗಿನ ಕೆಲವರು ಗುಣಕರ್ಮಗಳ ತತ್ತ್ವವನ್ನು ಅರಿತುಕೊಳ್ಳದೆ ಬ್ರಾಹ್ಮಣ ಗುಣಕರ್ಮಗಳಿದ್ದರೆ ಅವನು ಶೂದ್ರನೇ ಆಗಲಿ ವಿಧರ್ಮಿಯೇ ಆಗಲಿ ಅವರನ್ನು ಬ್ರಾಹ್ಮಣರಲ್ಲಿ ಸೇರಿಸುತ್ತಾ ಇದೇ ವಾದವನ್ನು ಮಾಡಿಕೊಂಡು ಅನರ್ಥವನ್ನುಂಟುಮಾಡುತ್ತಿರುವರು. ಇದರ ಮೂಲತತ್ತ್ವವನ್ನು ವಿಚಾರಮಾಡುವವರೆಗೂ ಈ ಭ್ರಾಂತಿಯು ಇವರಿಗೆ ಹೋಗುವದಿಲ್ಲ. ಸಂಶಯವು ಪರಿಹಾರವಾಗುವದಿಲ್ಲ ಇದರ ಮೂಲತತ್ತ್ವವೇನೆಂಬುವದನ್ನು ವಿಚಾರ ಮಾಡಬೇಕಾದುದು ಅತ್ಯಾವಶ್ಯಕವಾಗಿರುವದು.

ಗುಣಕರ್ಮಗಳಿಂದ ಬ್ರಾಹ್ಮಣಾದಿ ವಿಭಾಗವೆಂದು ವಾದಿಸುವವರು ಮೊದಲು ಆ ಗುಣಕರ್ಮಗಳಿಗೆ ಆಧಾರವಾದ ಶರೀರದ ಸ್ಥಿತಿಯನ್ನು ವಿಚಾರಮಾಡಬೇಕಲ್ಲವೆ ?

ಮಾತಾಪಿತೃಗಳ ರಜೋವೀರ್ಯಗಳಿಂದ ಈ ಶರೀರವು ಉತ್ಪನ್ನವಾಗುವದು. ಅದರ ಅಸ್ತಿತ್ವವೇ ಈ ಶರೀರದ ಅಸ್ತಿತ್ವವು ಇದರಿಂದ ಆ ರಜೋವೀರ್ಯಗಳನ್ನು ಬೇರ್ಪಡಿಸಿದರೆ ಶರೀರವೆಂಬುವದೇ ಇರುವದಿಲ್ಲ. ಜೀವನು ತಾಯಿತಂದೆಗಳ ವೀರ್ಯ, ಸಂಸ್ಕಾರ ಇವರಡರೊಂದಿಗೆ ಗರ್ಭಾಶಯದಲ್ಲಿ ಪ್ರವಿಷ್ಟನಾಗುವನು. ರಜೋವೀರ್ಯಗಳೊಂದಿಗೆ ಸೇರಿಬರುವಕಾರಣ ಸಂಸ್ಕಾರವು ಸ್ವಭಾವದಲ್ಲಿ ಕಂಡಾವಾಗುವದು. ಇದೇ ಜನ್ಮವೆಂದು ವ್ಯವಹರಿಸಲ್ಪಡುವದು. ಗುಣಕರ್ಮಗಳಿಗಿಂತಲೂ ಇದು ಮುಖ್ಯವಾದದ್ದು. ಏಕೆಂದರ ಈ ಜನ್ಮವಿದ್ದರೆ ಗುಣಕರ್ಮಗಳಿಗೆ ಅವಕಾಶವೇ ಹೊರ್ತು ಅನ್ಯಥಾ ಇಲ್ಲ ಆದುದರಿಂದ ಜನ್ಮವು ಗೋಡೆಯಂತೆಯೂ ಗುಣಕರ್ಮಗಳು ಆ ಗೋಡೆಯಲ್ಲಿ ಬರೆಯುವ ಚಿತ್ರದಂತೆಯೂ ಇರುವ ಕಾರಣ ಗೋಡೆ ಇಲ್ಲದಿದ್ದರೆ ಚಿತ್ರವು ಹೇಗೆ ಅಸಂಭಾವಿತವೂ ಹಾಗೆಯೇ ಗುಣಕರ್ಮಗಳೂ ಶರೀರವಿಲ್ಲದಿದ್ದರೆ ಅಸಂಭಾವಿತಗಳಾಗುವವು. ಗುಣವು ಯಾವಾಗಲೂ ದ್ರವ್ಯದಲ್ಲಿ ಇರಬೇಕಾದುದು. ಕರ್ಮವು ಸ್ವಯಂಜಡವಾದಕಾರಣ ಕರ್ತೃವಿಲ್ಲದೆ ಇರಲಾರದೆಂಬುದೂ ಸಹಾ ನ್ಯಾಯದ ನಿಯಮವಾಗಿರುವದು. ಆದುದರಿಂದಲೇ ಜಾತಿ ಮತ್ತು ಜಾತಿಭೇದವು ನ್ಯಾಯಸಿದ್ಧಾಂತವನ್ನು ಅನುಸರಿಸಿ ಯಜುರ್ವೇದದ ೩೦ ನೇ ಅಧ್ಯಾಯದಲ್ಲಿ ವರ್ಣಿತವಾಗಿರುವದಲ್ಲದೆ ಮನುಸ್ಮೃತಿಯ ೧೦ ನೇ ಅಧ್ಯಾಯದಲ್ಲಿಯೂ ವರ್ಣಿತವಾಗಿರುವದು.

ಇದಲ್ಲದೆ ಯಾರು ಗುಣಕರ್ಮಗಳೆ ಪ್ರಧಾನಗಳೆಂದು ಜನ್ಮವನ್ನು ದೂರೀಕರಿಸಿ ವಾದಿಸುತ್ತಲಿರುವರೋ ಆ ಆರ್ಯಸಮಾಜದವರ ಮೂಲಪುರುಷರಾದ

ಸ್ವಾಮಿ ದಯಾನಂದರು ಆರ್ಯೋದ್ದೇಶ್ಯ ರತ್ನಮಾಲೆಯಲ್ಲಿ ೩೮ ನೇ ನಂಬರಿನಲ್ಲಿ ಜಾತಿಯು ಈಶ್ವರ ಕೃತವೆಂದೂ, ಸತ್ಯಾರ್ಥಪ್ರಕಾಶದ ೩೮೮ ನೇ ಪುಟದಲ್ಲಿ ಜಾತಿ ಭೇದವು ಈಶ್ವರ ಕೃತವೆಂತಲೂ ಒಪ್ಪಿಕೊಂಡಿರುವರು. ಜಾತಿಯೂ ಜಾತಿ ಭೇದವೂ ಈಶ್ವರ ಕೃತವೆಂದಮೇಲೆ ಒಂದೇ ಜನ್ಮದಲ್ಲಿ ಜಾತಿಪರಿವರ್ತನವಾಗು ವದು, ದಯಾನಂದರ ಸಿದ್ಧಾಂತಕ್ಕೂ ವಿರುದ್ಧವಾಗಿರುವದು. ಸೃಷ್ಟಿ ಪ್ರಾರಂಭದಲ್ಲಿ ಜನ್ಮದ ಜೊತೆಯಲ್ಲಿಯೇ ಬ್ರಾಹ್ಮಣಾದಿ ನಾಮವೂ ನಿರ್ದಿಷ್ಟವಾಗು ವದು. ಹಾಗಿಲ್ಲದಿದ್ದರೆ ಸೃಷ್ಟಿಪ್ರಾರಂಭದಲ್ಲಿ ಬ್ರಾಹ್ಮಣಾದಿ ಜಾತಿಭೇದದ ಪ್ರಸಂಗವು ವೇದದಲ್ಲಿ ವರ್ಣಿಸಲ್ಪಡುತ್ತಿರಲಿಲ್ಲ ಜನನಕಾಲದಿಂದಲೇ ವೇದಾಭ್ಯಾಸವನ್ನು ಮಾಡುವದಕ್ಕೆ ಅಸಂಭವವಾದ್ದರಿಂದ ಬ್ರಾಹ್ಮಣ್ಯಕ್ಕೆ ವೇದಾಭ್ಯಾಸವೇ ಕಾರಣವಲ್ಲ ಇದಲ್ಲದೆ ಅನೇಕ ವೇದಮಂತ್ರಗಳಲ್ಲಿ ದ್ವಿಜ, ದ್ವಿಜನ್ಮಾ, ಎಂಬ ಪದಗಳು ಇವೆ. ಈ ಪದಗಳು ಕರ್ಮಕ್ಕಿಂತಲೂ ಜನ್ಮವೆ ಪ್ರಧಾನವೆಂದು ಸೂಚಿಸುತ್ತವೆ. ಹಾಗಲ್ಲದೆ ಜನ್ಮಕ್ಕಿಂತಲೂ ಕರ್ಮಕ್ಕೇನೇ ಪ್ರಾಧಾನ್ಯವಿದ್ದಿದ್ದರೆ ದ್ವಿಕರ್ಮಾ, ಎಂಬ ಪದವೂ ಇರುತ್ತಿತ್ತು. ಹಾಗೆ ಯಾವ ವೇದದಲ್ಲಿಯೂ ಹೇಳಿರುವುದಿಲ್ಲ

ಬ್ರಾಹ್ಮಣ ಲಕ್ಷಣದ ವಿಷಯದಲ್ಲಿ ವ್ಯಾಕರಣ ಮಹಾಭಾಷ್ಯದ ೨ನೇ ಅಧ್ಯಾಯ ೨ನೇ ಪಾದ ೬ನೇ ಸೂತ್ರದಲ್ಲಿ "ತಪಃಶ್ರುತಂಚಯೋನಿಶ್ಚೇತ್ಯೇತದ್ಬ್ರಾಹ್ಮಣಕಾರಕಂ। ತಪಃಶ್ರುತಾಭ್ಯಾಂಯೋಹೀನೋಜಾತಿಬ್ರಾಹ್ಮಣಏವಸಃ" ಎಂದು ತಪಸ್ಸು, ವೇದ,ಜನ್ಮ ಇವು ಮೂರು ಯಾರಲ್ಲಿವೆಯೋ ಅವನು ಉತ್ತಮ ಬ್ರಾಹ್ಮಣನೆಂತಲೂ ತಪಸ್ಸು ಶ್ರುತ ಎರಡೂ ಇಲ್ಲದಿದ್ದರೆ ಅವನು ಜಾತಿಬ್ರಾಹ್ಮಣನೆಂತಲೂ ಹೇಳಿರುವರಲ್ಲದೇ ೪ ನೇ ಅಧ್ಯಾಯ ೧ನೇ ಪಾದ ೪೮ ಸೂತ್ರದಲ್ಲಿಯೂ ಸಹಾ " ತ್ರೀಣಿಯಸ್ಯಾವದಾತಾನಿವಿದ್ಯಾಯೋನಿಶ್ಚಕರ್ಮಚ। ಏತಚ್ಛಿವೇವಿಜಾನೀಹಿ ಬ್ರಾಹ್ಮಣಾಗ್ರ್ಯಸ್ಯ ಲಕ್ಷಣಂ " ॥ ಎಂದು ಇದನ್ನು ಪರಿಪೋಷಿಸಿರುವರು. ಆದುದರಿಂದ ಜನ್ಮವು ಬ್ರಾಹ್ಮಣ್ಯಕ್ಕೆ ಮುಖ್ಯಕಾರಣವೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಬೋಧಾಯನಗೃಹ್ಯದಲ್ಲಿಯೂ ಸಹಾ " ಬ್ರಾಹ್ಮಣೇನ ಬ್ರಾಹ್ಮಣ್ಯಾಮುತ್ಪನ್ನಃ ಪ್ರಾಗುಪನಯನಾಜ್ಜಾತ ಇತ್ಯಭಿಧೀಯತೆ ಉಪನೀತಮಾತ್ರೋವ್ರತಾನುಚಾರೀ ವೇದಾನಾಂ ಕಿಂಚಿದಧೀತ್ಯಬ್ರಾಹ್ಮಣಃ ಶಾಖಾಮಧೀತ್ಯಶ್ರೋತ್ರಿಯಃ ಅಂಗಾಧ್ಯಾಯ್ಯನೂಚಾನಃ ಕಲ್ಪಾಧ್ಯಾಯೀಋಷಿಕಲ್ಪಃ ಚತುರ್ವೇದಾ ಋಷಿಃ ಅತಊರ್ಧ್ವಂದೇವಃ " ವೇದಾಧ್ಯಯನಾತ್ಪೂರ್ವದಲ್ಲಿ ಜಾತಿಬ್ರಾಹ್ಮಣನೆಂದು

ಜನ್ಮದಿಂದ ಬ್ರಾಹ್ಮಣ್ಯವನ್ನು ಹೇಳಿರುವದು. ಹೀಗಿರಲು ಜನ್ಮದಿಂದ ಬ್ರಾಹ್ಮಣ್ಯವೇ ಹೊರ್ತು ಗುಣಕರ್ಮಗಳಿಂದಲ್ಲವೆಂಬುವದು ಸರ್ವಋಷಿಸಮ್ಮತವಾಗಿರುವದು. ಇದರಮೇಲೆ ಗುಣಕರ್ಮಗಳನ್ನು ವಿಚಾರಮಾಡೋಣ. ಗುಣಕರ್ಮಗಳು ನೈಸರ್ಗಿಕವೆಂತಲೂ ಸಾಂಸರ್ಗಿಕವೆಂತಲೂ ಎರಡು ವಿಧಗಳಾಗಿರುವವು. ಜಾತಿ ಪರಂಪರೆಯಿಂದ ಯಾವ ಗುಣಗಳು ಜಡಜಂಗಮಜೀವಗಳಲ್ಲಿ ಸೇರಿ ಬರುವವೊ, ಅವುಗಳು ನೈಸರ್ಗಿಕಗಳೆಂದು ಹೇಳಲ್ಪಡುವವು. ಹೇಗೆಂದರೆ ಸಿಂಹದಲ್ಲಿ ಹಿಂಸೆ ಮತ್ತು ಕೋಪವೂ ಹಸುವಿನಲ್ಲಿ ಸಾಧುತ್ವ ಮತ್ತು ಅಹಿಂಸೆಯೂ, ಮೆಣಸಿನಲ್ಲಿ ಕಾರವೂ, ಕಬ್ಬಿನಲ್ಲಿ ಮಾಧುರ್ಯವೂ ನೈಸರ್ಗಿಕ ಗುಣಗಳು. ಹೀಗೆಯೇ ಸಂಸರ್ಗ ಅಥವಾ ಸಹವಾಸಾದಿಗಳಿಂದ ಉಂಟಾಗುವ ಗುಣಗಳು ಸಾಂಸರ್ಗಿಕಗಳು. ಹೇಗೆಂದರ ಸಿಂಹವೇ ಮೊದಲಾದವುಗಳಲ್ಲಿ ಸರ್ಕಸ್ಸಿನವರ ಶಿಕ್ಷೆಯಿಂದ ಕೋಪವೂ ಹಿಂಸೆಯೂ ಕಡಮೆಯಾಗುವವು. ಮೆಣಸು ಮೊದಲಾದವುಗಳು ತೀಕ್ಷ್ಣಭಾವವನ್ನು ಬಿಡುವವು. ಈ ಎರಡು ವಿಧವಾದ ಗುಣಗಳಲ್ಲಿ ನೈಸರ್ಗಿಕಗುಣವು ಚಿರಸ್ಥಾಯಿಯಾಗಿಯೂ ಸಾಂಸರ್ಗಿಕಗುಣವು ಸ್ವಲ್ಪಕಾಲಮಾತ್ರ ಇರುವುದಾಗಿಯೂ ಕಂಡುಬರುತ್ತದೆ. ನೈಸರ್ಗಿಕಗುಣದ ಸ್ವಭಾವವು ಅದನ್ನು ದೂರಮಾಡುವದಕ್ಕೆ ಅಸಂಭವವಿಲ್ಲದಿದ್ದಾಗ್ಯೂ ಅಸಾಧ್ಯವಾದಷ್ಟು ದೃಢವಾಗಿರುವದು. ಬ್ರಾಹ್ಮಣತ್ವಾದಿಜಾತಿ ಪರಂಪರೆಯ ಗುಣಗಳು ನೈಸರ್ಗಿಕಗಳಾದ ಕಾರಣ ಚಿರಸ್ಥಾಯಿಗಳಾಗಿಯೂ, ಆಧುನಿಕ, ದೇಶ, ಕಾಲ, ಸಹವಾಸ ಮೊದಲಾದ ಕಾರಣಗಳಿಂದ ಬಂದೊದಗುವ ಸಾಂಸರ್ಗಿಕಗುಣಗಳು ಸ್ವಲ್ಪಕಾಲ ಮಾತ್ರ ಇರತಕ್ಕವುಗಳಾಗಿಯೂ ಇವೆ. ಈ ಸಾಂಸರ್ಗಿಕಗುಣಗಳು ಹೆಚ್ಚಿದರೆ ಸ್ವಾಭಾವಿಕ ಗುಣಗಳನ್ನು ನಿರಾಕರಿಸಬಲ್ಲದು. ಆದರೆ ನಿಃಶೇಷವಾಗಿ ಹೋಗಲಾಡಿಸಲಾರದು. ಸ್ವಾಭಾವಿಕ ಗುಣಗಳಾದರೋ ಸಾಂಸರ್ಗಿಕ ಗುಣಗಳನ್ನು ಸುಲಭವಾಗಿಯೇ ನಾಶಮಾಡಬಲ್ಲದು. ಸಾವಿರಾರು ವರ್ಷಗಳಿಂದಲೂ ನಾನಾವಿಧವಾದ ಜಾತಿ, ಧರ್ಮ, ಶಾಸನ, ದೇಶ, ಕಾಲ, ಇವುಗಳ ಗುಣದೋಷಗಳ ಪ್ರಭಾವವು ಬ್ರಾಹ್ಮಣಾದಿ ವರ್ಣಗಳಮೇಲೆ ಬೀಳುತ್ತಿದ್ದಾಗ್ಯೂ ಒಬ್ಬ ಮೂರ್ಖ ಬ್ರಾಹ್ಮಣನು ಧಾರ್ಮಿಕ ವಿಚಾರಗಳನ್ನು ತಿಳಿದಿರುವಂತೆ ಇತರನು ತಿಳಿದಿರಲಾರನು. ಹಾಗೆಯೇ ದೀನನಾಗಿಯೂ, ದುರ್ಬಲನಾಗಿಯೂ, ಅಸ್ತ್ರವಿಹೀನನಾಗಿಯೂ ಇರುವ ಕ್ಷತ್ರಿಯನು ಸಾಹಸ ಕೆಲಸಗಳಲ್ಲಿ ಆಧಿಕವಾಗಿ ಪ್ರವೇಶ ಮಾಡುವಂತೆ ತದಿತರರು ಪ್ರವೇಶಮಾಡಲಾರರು. ಇಂತಹ

ಅವಸ್ಥೆಯಲ್ಲಿ ಸ್ವಾಭಾವಿಕ ವರ್ಣವ್ಯವಸ್ಥೆಯನ್ನು ದೂರವಮಾಡಿ ಸಾಂಸರ್ಗಿಕ ಗುಣಗಳಿಗೆ ತಕ್ಕಂತೆ ವರ್ಣವ್ಯವಸ್ಥೆಯನ್ನು ಮಾಡುವದು ಎಂದಿಗೂ ಯುಕ್ತಿಸಂಗತವಲ್ಲವು ಈ ಅಭಿಪ್ರಾಯದಿಂದಲೇ ಗೀತೆಯಲ್ಲಿ "ಸ್ವಭಾವಪ್ರಭವೈರ್ಗುಣೈಃ" ಎಂದು ನೈಸರ್ಗಿಕಗುಣಗಳನ್ನು ಅನುಸರಿಸಿ ಚಾತುರ್ವರ್ಣ್ಯವು ಸೃಜಿಸಲ್ಪಟ್ಟಿರುವದೆಂಬು ಹೇಳಿರುವರು. ಸುಗುಣಗಳಿಗಿಂತಲೂ ದುರ್ಗುಣಗಳ ಪ್ರಾಬಲ್ಯವೇ ಪ್ರಬಲಗಳೆಂಬಂಶವನ್ನು ಎಲ್ಲರೂ ಒಪ್ಪುವರು. ಈ ವರ್ಣವ್ಯವಸ್ಥೆಯು ಯಜುರ್ವೇದದಲ್ಲಿ ಹೇಳಲ್ಪಟ್ಟಿದೆ. ಅದನ್ನು ಸಾಧಾರಣವಾಗಿ ನೋಡಿದರೆ ಬ್ರಾಹ್ಮಣನು ಈಶ್ವರನ ಮುಖದಿಂದಲೂ, ಕ್ಷತ್ರಿಯನು ಬಾಹುವಿನಿಂದಲೂ, ವೈಶ್ಯನು ತೊಡೆಗಳಿಂದಲೂ, ಶೂದ್ರನು ಪಾದಗಳಿಂದಲೂ ಉತ್ಪನ್ನರಾದರೆಂದು ಅರ್ಥವಾಗುವದು. ಆದರೆ ಈ ರೂಪಕಮಯವಚನದಲ್ಲಿ ಒಂದು ಮಹಾ ಗಂಭೀರವಾದ ಭಾವವೂ ಕೂಡಾ ಅಡಗಿರುವದು. ಅದನ್ನು ಮುಂದೆ ವರ್ಣನೆ ಮಾಡುವೆವು.

## ಮುಖ ಮತ್ತು ಬ್ರಾಹ್ಮಣ.

ಶರೀರದ ಎಲ್ಲಾ ಅಂಗಗಳಿಗಿಂತಲೂ ಮುಖವು ಸತ್ತ್ವಗುಣಪ್ರಧಾನವಾದ ಅಂಗವಾಗಿರುವದು. ಆದುದರಿಂದಲೇ ಅದು ಎಲ್ಲಾ ಅಂಗಗಳಿಗಿಂತಲೂ ಮೇಲ್ಭಾಗದಲ್ಲಿರುವದು. "ಸರ್ವಸ್ಯಗಾತ್ರಸ್ಯಶಿರಃಪ್ರಧಾನಂ" ಎಂದು ಇದಕ್ಕೆ ಪ್ರಾಧಾನ್ಯವನ್ನು ಒಪ್ಪಿರುವರು. ಅದೇ ರೀತಿಯಲ್ಲಿ ಬ್ರಾಹ್ಮಣನೂ ಕೂಡ ಸತ್ತ್ವಗುಣಪ್ರಧಾನನು. ಮತ್ತು ಮುಖ್ಯನು. ಜ್ಞಾನಶಕ್ತಿಯಿಂದ ಕೆಲಸವನ್ನು ಮಾಡುವದು ಮುಖದ ಮತ್ತು ಬ್ರಾಹ್ಮಣನ ಕೆಲಸವಾಗಿರುವದು. ಆದುದರಿಂದಲೇ ಜ್ಞಾನೇಂದ್ರಿಯಗಳ ಸಮೂಹಗಳು ತಲೆಯಲ್ಲಿಯೇ ಇರುವದು. ವಾಕ್ಯುಮುಖದಲ್ಲಿಯೇ ಉಂಟಾಗುವ ಕಾರಣ ಬ್ರಾಹ್ಮಣರಿಗೆ ವಿದ್ಯೆಯೇ ಮುಖ್ಯವಾಯಿತು. ಆದುದರಿಂದ ತಮ್ಮ ಜ್ಞಾನೇಂದ್ರಿಯಗಳ ಶಕ್ತಿಯಿಂದ ಸರ್ವ ವರ್ಣಗಳಿಗೂ ಸಹಾಯವನ್ನು ಕಲ್ಪಿಸುವದು ಬ್ರಾಹ್ಮಣರ ಮುಖ್ಯಕರ್ತವ್ಯವು.

## ಬಾಹು ಮತ್ತು ಕ್ಷತ್ರಿಯ.

ಬಾಹುವು ರಜೋಗುಣಪ್ರಧಾನವಾದ ಅಂಗವು. ಬಾಹುವು ಬಲಕ್ಕೆ ಆಶ್ರಯವಾಗಿರುವದರಿಂದ ಬಲಪ್ರಯೋಗದಿಂದ ಕೆಲಸಮಾಡುವದು ಕ್ಷತ್ರಿಯರ ಮುಖ್ಯ ಕೆಲಸವಾಗಿರುವದು. ಶರೀರದ ಅಹಿತವನ್ನು ದಮನಮಾಡುವದು ಬಾಹುವಿನ ಕೆಲಸವಾದ್ದರಿಂದ ಸಂಪೂರ್ಣ ಶರೀರದ ಪ್ರಭುತ್ವವು

ಬಾಹುವಿಗೆ ಇರುವದು. ಹಾಗೆಯೇ ಕ್ಷತ್ರಿಯನೂ ನಾನಾವಿಧವಾದ ಬಲಪ್ರಯೋಗದಿಂದ ಸರ್ವ ವರ್ಣಗಳನ್ನು ಪಾಲಿಸುವನಾದಕಾರಣ ಸರ್ವ ವರ್ಣಗಳ ಪ್ರಭುತ್ವವೂ ಕ್ಷತ್ರಿಯನಿಗೆ ಪ್ರಾಪ್ತವಾಗಿರುವದು.

ಊರು ಮತ್ತು ವೈಶ್ಯ.

ತೊಡೆಯಲ್ಲಿ ಶಕ್ತಿ ಇದ್ದರೆ ಸಂಚಾರ ಮಾಡಬಹುದು. ಹಾಗೆಯೇ ಸಂಪೂರ್ಣ ಖಾದ್ಯ ಪದಾರ್ಥಗಳನ್ನು ಉದರದಲ್ಲಿ ಧರಿಸುವದೂ ಸಹಾ ತೊಡೆಯ ಶಕ್ತಿಯಿಂದಲೇ. ಮತ್ತು ಅವುಗಳನ್ನು ಎಲ್ಲಾ ಅಂಗಗಳಿಗೂ ಸೇರುವಂತೆ ಮಾಡುವುದೂನಹಾ ತೊಡೆಯ ಶಕ್ತಿಯು ಆಗಿರುವದು. ಹಾಗೆಯೇ ವೈಶ್ಯರೂ ಕೂಡ ಪರ್ಯಟನಕುಶಲರಾಗಿ ಅನ್ನಾದಿಗಳನ್ನು ಸಂಗ್ರಹಿಸಿ ಎಲ್ಲಾ ವರ್ಣಗಳಿಗೂ ಸಹಾಯವನ್ನು ಕಲ್ಪಿಸಬೇಕಾದುದು ಅವರ ಮುಖ್ಯಕರ್ತವ್ಯವು.

ಪಾದ ಮತ್ತು ಶೂದ್ರ.

ಎಲ್ಲಾ ಅಂಗಗಳ ಭಾರವನ್ನು ಹೊರುವದು ಪಾದದ ಮುಖ್ಯ ಕೆಲಸವಾಗಿರುವುದು. ಹಾಗೆಯೇ ಸರ್ವ ವರ್ಣಗಳಿಗೂ ಸಹಾಯಮಾಡುವದು ಶೂದ್ರರ ಮುಖ್ಯ ಕೆಲಸವಾಗಿರುವದು. ಈ ಮುಖ ಮೊದಲಾದ ನಾಲ್ಕು ಅಂಗಗಳಿಗೂ ತಮ್ಮ ತಮ್ಮ ಕರ್ತವ್ಯಗಳನ್ನು ಸರಿಯಾದ ರೀತಿಯಿಂದ ಮಾಡುತ್ತಿದ್ದರೆ ಶರೀರವು ಸ್ವಸ್ಥವಾಗಿರುವದು. ಹಾಗೆಯೇ ನಾಲ್ಕು ವರ್ಣಗಳು ತಮ್ಮ ತಮ್ಮ ಕರ್ಮಗಳಲ್ಲಿ ನಿರತರಾಗಿದ್ದರೆ ಮನುಷ್ಯಸಮಾಜವು ಅಭಿವೃದ್ಧಿಹೊಂದುವುದು. ಜ್ಞಾನೇಂದ್ರಿಯಗಳ ಕೆಲಸಗಳನ್ನು ಬಾಹುವಿನಿಂದ ಮಾಡಿಸುವದಾಗಲಿ ಬಾಹುವಿನ ಕೆಲಸವನ್ನು ಕಾಲಿನಿಂದ ಮಾಡಿಸುವದಾಗಲಿ ಅಸಂಭವವಿಯು. ಈ ನಾಲ್ಕು ಅಂಗಗಳು ಭಗವಂತನ ಮುಖ್ಯವಾದ ಅಂಗಗಳು. ಶಿರಸ್ಸು ಮುಖ್ಯವೆಂಬುವದನ್ನು ಹೇಳಬೇಕಾದುದಿಲ್ಲ. ಬಾಹುವೂ ಸಹಾ ಸಕಲರನ್ನು ಕಾಪಾಡುವದರಲ್ಲಿ ಬದ್ಧದೀಕ್ಷವಾದದ್ದು. ತೊಡೆಯ ಶಕ್ತಿ ಇಲ್ಲದಿದ್ದರೆ ಪ್ರಯೋಜನವೇ ಇಲ್ಲ. ಪಾದಗಳಾದರೋ ಸಕಲರೂ ಸೇವಿಸುವುದಕ್ಕೆ ಯೋಗ್ಯವಾದದ್ದು. ಎಲ್ಲರೂ ಭಗವಂತನ ಪಾದಕ್ಕೆ ನಮಸ್ಕರಿಸುವರೇ ಹೊರ್ತು ಶಿರಗ ನಮಸ್ಕರಿಸುವದಿಲ್ಲ. ಅಂತಹ ಭಗವಂತನ ಪಾದದಲ್ಲಿ ಹುಟ್ಟಿದವರು ಶೂದ್ರರು ಎಂದರೆ ಶೂದ್ರರ ಕೆಲಸವು ಇತರ ವರ್ಣಗಳ ವಿಷಯದಲ್ಲಿ ಎಷ್ಟು ಮಹತ್ವವುಳ್ಳದ್ದು ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಮುಖ್ಯವಾಗಿ ಆಯಾಯ ವರ್ಣಗಳು ತಮ್ಮ ಪರಂಪರಾ ಪ್ರಾಪ್ತವಾದ ಕರ್ಮಗಳನ್ನು ಮಾಡದೆ ಮನಬಂದಂತೆ ಪ್ರವೃ

ರ್ತಿಸುವುದಾದರೆ ಆ ಸಂದರ್ಭದಲ್ಲಿ ಹಿಂದೆ ಹೇಳಿದ ಅಂಗಗಳು ತಮ್ಮ ತಮ್ಮ ಕೆಲಸಗಳನ್ನು ತ್ಯಾಗಮಾಡುವುದರಿಂದ ದೇಹಕ್ಕೆ ಕ್ಷೀಣತೆಯುಂಟಾಗುವಂತೆ ಮನುಷ್ಯ ಸಮಾಜಕ್ಕೆ ಕ್ಷೀಣತೆಯುಂಟಾಗುವದು. ಈಗ ಈ ಮನುಷ್ಯ ಸಮಾಜದಲ್ಲಿ ಉಂಟಾಗುತ್ತಿರುವ ಹೀನದೆಶೆಗೆ ಇದೂ ಒಂದು ಕಾರಣವೆಂಬಂಶದಲ್ಲಿ ಯಾವ ಸಂದೇಹವೂ ಇಲ್ಲ. ಆದುದರಿಂದ ಸರ್ವ ವರ್ಣದವರೂ ತಮಗೆ ಜನ್ಮದಿಂದ ಪ್ರಾಪ್ತವಾದ ಕರ್ಮಗಳನ್ನೇ ಉತ್ತಮವೆಂದು ಭಾವಿಸಿ ಅದರಲ್ಲಿಯೇ ತೃಪ್ತರಾಗಿ ಇತರ ವರ್ಣಗಳ ಸೇವೆಯನ್ನು ಮಾಡುತ್ತಾ ಮನುಷ್ಯ ಸಮಾಜಕ್ಕೆ ಅಭಿವೃದ್ಧಿಯನ್ನುಂಟುಮಾಡಬೇಕು. ಗುಣಕರ್ಮಗಳು ಸ್ವಭಾವ ಜನ್ಯಗಳೆಂತಲೂ ಸಂಸರ್ಗ ಜನ್ಯಗಳೆಂತಲೂ ಎರಡು ವಿಧಗಳಾಗಿರುವದರಿಂದಲೂ ಸಂಸರ್ಗಜನ್ಯಕ್ಕಿಂತಲೂ ಸ್ವಭಾವಜನ್ಯ ಗುಣಕರ್ಮಗಳು ಪ್ರಬಲಗಳಾದುದರಿಂದಲೂ, ಆ ಸ್ವಭಾವಜನ್ಯ ಗುಣಕರ್ಮಗಳು ಪೂರ್ವಪುರುಷರ ರಕ್ತಕಣಗಳಲ್ಲಿ ಬೆರತು ಪರಂಪರೆಯಾಗಿ ಬರುವದರಿಂದಲೂ ಸಹ ಪೂರ್ವಕಾಲದಿಂದಲೂ ವರ್ಣಗಳು ಜನ್ಮವನ್ನನುಸರಿಸಿಯೇ ಪ್ರಚಲಿತಗಳಾಗಿರುವವು. ಸಹವಾಸ ಜನ್ಯವಾದ ಗುಣಕರ್ಮಗಳನ್ನನುಸರಿಸಿ ಜಾತಿಯನ್ನು ವ್ಯವಸ್ಥೆಪಡಿಸುವದು ಅಷ್ಟು ಸಮರ್ಪಕವಲ್ಲ. ಆದುದರಿಂದಲೇ ಬ್ರಾಹ್ಮಣ ಕುಮಾರನಾದ ಪರಶುರಾಮನೂ ದ್ರೋಣಾಚಾರ್ಯನೂ ಸಂಸರ್ಗ ಜನ್ಯವಾದ ಕ್ಷತ್ರಿಯ ಕರ್ಮವನ್ನು ಆಶ್ರಯಿಸಿದ್ದರೂ ಅವರನ್ನು ಕ್ಷತ್ರಿಯರೆಂದು ಯಾರೂ ವ್ಯವಹರಿಸಲಿಲ್ಲ. ಬ್ರಾಹ್ಮಣರೆಂದೇ ವ್ಯವಹರಿಸಲ್ಪಟ್ಟಿರುವರೆಂಬಂಶವು ನಮ್ಮ ಶಾಸ್ತ್ರಗಳಲ್ಲಿ ಕಂಡುಬರುವದು. ಅದೇ ಪ್ರಕಾರವಾಗಿ ಮಹಾತ್ಮನಾದ ಪ್ರಹ್ಲಾದನು ಮಹಾರಾಜನಾದ ಜನಕನು ತಪಸ್ವಿ ಶಿರೋಮಣಿಯೆನಿಸಿದ ಧ್ರುವನು ಇವರುಗಳನ್ನು ಬ್ರಾಹ್ಮಣರೆಂದು ಎಲ್ಲಿಯೂ ಹೇಳಲಿಲ್ಲ. ಪರಮಭಕ್ತನಾಗಿಯೂ ನೀತಿ ನಿಪುಣನಾಗಿಯೂ ಮಹಾಜ್ಞಾನಿಯಾಗಿಯೂ ಇದ್ದ ವಿದುರನನ್ನು ಬ್ರಾಹ್ಮಣನೆಂದು ಹೇಳದೆ ದಾಸೀಪುತ್ರನೆಂದುವ್ಯವಹರಿಸಿರುವರು. ಇವುಗಳೆಲ್ಲವನ್ನು ಪರಿಶೀಲಿಸಿದರೆ ಸ್ವಾಭಾವಿಕವಾದ ಗುಣಕರ್ಮಗಳಿಂದ ಕೂಡಿದ ಜನ್ಮವನ್ನನುಸರಿಸಿಯೇ ವರ್ಣವು ವ್ಯವಸ್ಥಿತವಾಗಿರುವದೆಂದು ಸ್ಪಷ್ಟವಾಗಿಯೂ ತಿಳಿದುಬರುವದು. ಇದಕ್ಕೆ ವಿರುದ್ಧವಾಗಿ ಸಾಂಸರ್ಗಿಕವಾದ ಗುಣಕರ್ಮಗಳನ್ನನುಸರಿಸಿ ಜಾತಿ ವ್ಯವಸ್ಥೆಯನ್ನು ಮಾಡುವುದಾದರೆ ತಂದೆಯು ಬ್ರಾಹ್ಮಣನಾದರೆ ಮಗನು ತನ್ನ ಗುಣಕರ್ಮಗಳಿಗನುಸಾರವಾಗಿ ಕ್ಷತ್ರಿಯನೋ ಅಥವಾ ವೈಶ್ಯನೊ ಆಗಬೇಕಾಗುವದು. ಹಾಗೆಯೇ

ತಂದೆಯು ಕ್ಷತ್ರಿಯನಾಗಿದ್ದರೆ ಮಗನು ಬ್ರಾಹ್ಮಣನಾಗುತ್ತಾ ಪ್ರತಿಯೊಂದು ಮನೆಯಲ್ಲಿಯೂ ಪ್ರತಿಯೊಂದು ಜನಕ್ಕೂ ಜಾತಿ ಬೇರೆ ವರ್ಣವಾಗಬೇಕಾಗುವುದು. ಏಕೆಂದರೆ ಪ್ರತಿಯೊಬ್ಬನ ಗುಣಗಳೂ ಸ್ವಭಾವವೂ ಏಕರೀತಿಯಲ್ಲಿ ಇರುವದಿಲ್ಲ. ಭಿನ್ನಭಿನ್ನಗಳಾಗಿರುವವು. ಇದನ್ನನುಸರಿಸಿ ನಾಲ್ಕು ವರ್ಣಗಳು ಒಟ್ಟಿಗೆ ಒಂದೆ ಮನೆಯಲ್ಲಿ ವಾಸಮಾಡುವ ಸಂಭವವು ಒದಗುವುದು. ಇದರಿಂದ ಸಂಸಾರದಲ್ಲಿ ಎಷ್ಟು ಗಲಭೆಗಳುಂಟಾಗಬಹುದೊ ಅದನ್ನು ಸುಲಭವಾಗಿಯೇ ಊಹಿಸಿ ತಿಳಿಯಬಹುದು. ಇವುಗಳೆಲ್ಲವನ್ನೂ ಪರ್ಯಾಲೋಚಿಸಿಯೇ ದೀರ್ಘದರ್ಶಿಗಳಾದ ಮಹರ್ಷಿಗಳು ಜನ್ಮವನ್ನನುಸರಿಸಿಯೇ ಜಾತಿಭೇದವನ್ನು ನಿರ್ಣಯಿಸಿರುವರು.

ಈಗ ಈ ಜಾತೀಭೇದವು ಹೇಗೆ ಸ್ವಾಭಾವಿಕವೆಂಬಂಶವನ್ನು ವಿಚಾರ ಮಾಡುವೆವು.

ಈ ಸಂಸಾರದಲ್ಲಿ ಯಾವ ಪ್ರಾಣಿಯೇ ಆಗಲಿ ಯಾವ ಪದಾರ್ಥವೇ ಆಗಲಿ ಜಾತಿಭೇದಗಳಿಗೆ ಒಳಗಾಗದೇ ಇರುವದಿಲ್ಲ. ಯಾವದನ್ನು ನೋಡಿದರೂ ಮೊದಲು ಅದರ ಸ್ಥೂಲಭೇದಗಳು ಗೋಚರವಾಗುವವು. ಆದರಮೇಲೆ ಆ ಸ್ಥೂಲಭೇದಗಳೊಳಗೆ ಪುನಃ ಭೇದವು ಕಾಣುವುದು. ಪ್ರತಿ ಒಂದು ವೃಕ್ಷವೂ ಎಲೆಗಳಿಂದಲೂ ಕೊಂಬೆಗಳಿಂದಲೂ ಒಂದೇ ವಿಧವಾಗಿ ಕಂಡುಬಂದರೂ ಅದರಲ್ಲಿ ಲೆಕ್ಕವಿಲ್ಲದಷ್ಟು ಭೇದಗಳಿವೆ. ಕೆಲವು ಲತಾವರ್ಗದಲ್ಲಿಯೂ ಕೆಲವು ವೃಕ್ಷವರ್ಗದಲ್ಲಿಯೂ ಸೇರುತ್ತವೆ. ಅವುಗಳಲ್ಲಿಯೂ ಕೆಲವು ಫಲವುಳ್ಳವುಗಳು. ಕೆಲವು ಕೇವಲ ಹೂವುಗಳುಳ್ಳವುಗಳು. ಕೆಲವು ಪುಷ್ಪಫಲಗಳೆರಡರಿಂದಲೂ ಕೂಡಿರುವವು. ಮಾವಿನಮರಗಳಲ್ಲಿ ಕೆಲವು ಸೀಮಾವಿನಮರವಾಗಿಯೂ ಕೆಲವು ಹುಳಿಮಾವಿನ ಮರವಾಗಿಯೂ ಇರುವವು ಈ ಭೇದಪ್ರಭೇದಗಳ ಉತ್ಪತ್ತಿಯು ಕಡೆಗೆ ಧ್ಯಾನವಿಟ್ಟರೆ ಮಾವಿನ ಬೀಜದಿಂದ ಮಾವಿನಮರವೂ, ಆ ಮಾವಿನ ಬೀಜಗಳೊಳಗೂ ಸೀಮಾವಿನ ಬೀಜದಿಂದ ಸೀಮಾವಿನಮರವೂ ಹುಳಿಮಾವಿನ ಬೀಜದಿಂದ ಹುಳಿಮಾವಿನಮರವೂ ಉಂಟಾಗುವವು. ಈ ರೀತಿಯಲ್ಲಿ ವೃಕ್ಷಾದಿಗಳ ಬೀಜದಲ್ಲಿಯೇ ಮಧುರ ಹುಳಿ ಮೊದಲಾದ ಜಾತೀಯ ಗುಣಗಳು ಸೇರಿಕೊಂಡಿರುವವು. ಮನುಷ್ಯನಲ್ಲಿಯೂ ಹಾಗೆಯೇ ಇರುವಂತೆ ಕಂಡುಬರುತ್ತದೆ. ಯಾವ ವಿಶೇಷ ಕಾರಣವೂ ಇಲ್ಲದಿದ್ದರೆ ತಾಯಿತಂದೆಗಳ ಗುಣಗಳು ಸಂತಾನದಲ್ಲಿ ಬರಬೇಕಾಗಿರುವ-

ಸಂಭವವಿರುವದಿಲ್ಲ. ಶಾಸ್ತ್ರದಲ್ಲಿಯೂ " ಆತ್ಮಾವೈಜಾಯತೇಪುತ್ರಃ " ಪುತ್ರನು ತಂದೆಗೆ ಪ್ರತಿಬಿಂಬನಾಗಿ ಸಮಾನನಾಗಿ ಉತ್ಪನ್ನನಾಗುವನೆಂದು ಹೇಳಿರುವದು. ತಂದೆಯಲ್ಲಿ ಯಾವದಾದರೂ ರೋಗವಿದ್ದರೆ ಅದರ ಪ್ರಭಾವವು ಪುತ್ರನಲ್ಲಿಯೂ ಕಂಡುಬರುವದು. ತಂದೆಯಲ್ಲಿರುವ ಸುಗುಣ ದುರ್ಗುಣಗಳೂ ಕೂಡ ಪುತ್ರನಲ್ಲಿ ಕಂಡುಬರುತ್ತವೆ. ಹೀಗೆ ತಂದೆಯ ಗುಣಾಗುಣಗಳು ಪುತ್ರನಲ್ಲಿ ಸ್ವಾಭಾವಿಕವಾಗಿಯೇ ಉಂಟಾಗುತ್ತಿರುವಾಗ ತಂದೆಯ ಜಾತಿಯೂ ಸಹ ಪುತ್ರನಲ್ಲಿ ಹೇಗೆ ಬರುವದಿಲ್ಲ ? ಮಹಾತ್ಮರಾದ ಶುಕರಂತಹ ಬ್ರಾಹ್ಮಣ ಕುಮಾರರು ಜನ್ಮಾರಭ್ಯ ವಿದ್ವಾಂಸರಾಗಿದ್ದುದು ಜಾತಿಯ ಗುಣಪ್ರಭಾವವೆಂದೇ ಹೇಳಬೇಕು. ಹಾಗೆಯೇ ಅಭಿಮನ್ಯುವಿನಲ್ಲಿ ಅವನ ತಂದೆಯಾದ ಅರ್ಜುನನ ಎಲ್ಲಾ ಗುಣಗಳೂ ತಾನಾಗಿಯೇ ಉದ್ಭವಿಸಿದ್ದುವು. ಸಂಸಾರದಲ್ಲಿ ಅಮಾರ್ಗದಲ್ಲಿ ಹೋಗದಂತೆ ತಡೆಯುವ ಶಕ್ತಿಯು ಮನುಷ್ಯನಿಗೆ ಜಾತಿಯಲ್ಲಿಯೇ ಇರುವದು. ದುಷ್ಯಂತ ಪುತ್ರನಾದ ಸರ್ವದಮನನು ತನ್ನ ಅತ್ಯಲ್ಪ ವಯಸ್ಸಿನಲ್ಲಿಯೇ ಸಿಂಹವನ್ನು ಸ್ವಾಧೀನಪಡಿಸಿಕ್ಕೊಳ್ಳುವದಕ್ಕೆ ಪ್ರಾರಂಭಮಾಡಿದ್ದನು.

ಎಲ್ಲಾ ಮನುಷ್ಯರಲ್ಲಿಯೂ ರಕ್ತಮಾಂಸಗಳು ಒಂದೇ ಆಗಿರುವಾಗ ಭೇದವೆಲ್ಲಿ ಬಂತು ? ಎಂದು ಆಕ್ಷೇಪಿಸುವದು ಸುಲಭವೇ. ಆದರೆ ಈ ಪ್ರಶ್ನೆಗೆ ಉತ್ತರವನ್ನು ಕೊಡುವದಾಗಲಿ ಅದನ್ನು ಅರಿತುಕೊಳ್ಳುವದಾಗಲಿ ಅಷ್ಟು ಸುಲಭವಲ್ಲ. ಇದನ್ನು ಮಹರ್ಷಿಗಳು ಬಲ್ಲರು. ನಮ್ಮ ಪೂರ್ವಪುರುಷರುಗಳು ಇದನ್ನು ಅರಿತು ಆಚರಣೆಗೆ ತಂದಿರುವರೇ ಹೊರತು ಕಪಿಗಳಂತೆ ಅನುಕರಣಮಾಡಿ ಬಂದವರಲ್ಲ. ಇದರ ಲಾಭಾಲಾಭಗಳು ಅವರೆಲ್ಲರಿಗೂ ಚೆನ್ನಾಗಿ ತಿಳಿದಿದ್ದವು. ಇದಕ್ಕೆ ಅನೇಕ ಪ್ರಮಾಣಗಳಿವೆ. ಮನುಷ್ಯರಿಗೂ ಸಕಲ ಜೀವಜಾತಿಗಳಿಗೂ ರಕ್ತವು ಒಂದೇ ವಿಧವಾಗಿರುವದು. ಆದರೆ ಗುಣಕರ್ಮಗಳು ಮಾತ್ರ ಪರಸ್ಪರ ಭಿನ್ನಗಳಾಗಿರುವವು. ಈ ನಾಲ್ಕು ವರ್ಣಗಳು ವಿಭಾಗಿಸಲ್ಪಟ್ಟಾಗಲೇ ಆ ನಾಲ್ಕು ವರ್ಣಗಳಿಗೂ ಗುಣಕರ್ಮಗಳು ಬೇರೆಬೇರೆಯಾಗಿ ನಿಯಮಿಸಲ್ಪಟ್ಟವು. ಅದರಂತೆ ಪ್ರತಿಒಂದು ವರ್ಣವೂ ತಮ್ಮ ತಮ್ಮ ಧರ್ಮವನ್ನು ನಿರ್ವಹಿಸುವದಕ್ಕೆ ನಿಯಮವು ಏರ್ಪಟ್ಟಿತು. ಭಾರತ ವರ್ಷದಲ್ಲಿ ಅದರಂತೆ ಕಾರ್ಯಕ್ರಮವು ನಡೆಯುತ್ತಿದ್ದ ಪರ್ಯಂತವೂ ಮತ್ತು ನಾಲ್ಕು ವರ್ಣಗಳೂ ತಮ್ಮ ತಮ್ಮ ಧರ್ಮಗಳಲ್ಲಿ ನಿರತರಾಗಿದ್ದ ಪರ್ಯಂತವೂ ನಮ್ಮ ದೇಶವೂ ನಮ್ಮ ಜಾತಿಯೂ ಪ್ರಪಂಚದಲ್ಲೆಲ್ಲಾ ಶ್ರೇಷ್ಠವೆನ್ನಿಸಿಕ್ಕೊಂಡಿದ್ದಿತು. ಅದರಲ್ಲಿ ಒಂದು

ಸ್ವಾರಸ್ಯವಿದ್ದಿತು. ಅದೇನಂದರೆ ಯಾವ ವರ್ಣದಲ್ಲಿ ಯಾವನು ಜನಿಸುವನೋ ಅವನಿಗೆ ಆ ಜಾತಿಯ ಧರ್ಮವೂ ಗುಣವೂ ತಾನಾಗಿಯೇ ಉಂಟಾಗುತ್ತಿತ್ತು. ಏಕೆಂದರೆ ತಾಯಿತಂದೆಗಳ ಗುಣಕರ್ಮಗಳ ಪ್ರಭಾವವು ಇವನಲ್ಲಿ ಸೇರಿಬರುತ್ತಿದ್ದದ್ದು ಒಂದು, ಬಾಲ್ಯದಿಂದಲೂ ಆಧರ್ಮಾನುಗುಣವಾಗಿ ಮನೆಯಲ್ಲಿ ನಡೆಯುತ್ತಿರುವ ಕಾರ್ಯಗಳನ್ನು ನೋಡುತ್ತಿದ್ದದ್ದು ಒಂದು, ಅದರ ವಿಚಾರವನ್ನು ರಾತ್ರಿ ಹಗಲೂ ಕೇಳುತ್ತಿದ್ದದ್ದು ಒಂದು, ಹೀಗೆ ಅನೇಕ ಕಾರಣಗಳಿಂದ ಅವನ ಕುಲದ ಕಸಬುಗಳು ಪರಿಶ್ರಮವಿಲ್ಲದೇನೇ ಇವನಿಗೆ ಬರುತ್ತಿತ್ತು. ಇದರಿಂದ ಬಾಲಕರುಗಳಿಗೆ ತಮ್ಮ ಕಸುಬನ್ನು ತಮ್ಮ ಧರ್ಮವನ್ನು ಕಲಿಯುವದರಲ್ಲಿ ವಿಶೇಷ ಶ್ರಮಪಡಬೇಕಾದ್ದು ಇರಲಿಲ್ಲ ವಿಶೇಷ ಶ್ರಮಪಟ್ಟು ತಮ್ಮ ಅಮೂಲ್ಯವಾದ ಸ್ವಾಸ್ಥ್ಯವನ್ನು ಕೆಡಿಸಿಕೊಳ್ಳಬೇಕಾಗಿಯೂ ಇರಲಿಲ್ಲ. ಆ ಕಾಲದಲ್ಲಿ ಮನುಷ್ಯರು ಬಲಶಾಲಿಗಳಾಗಿಯೂ ದೀರ್ಘಾಯುಷ್ಮಂತರಾಗಿಯೂ ಇದ್ದುದಕ್ಕೆ ಇದೊಂದು ಪ್ರಬಲಕಾರಣವಾಗಿತ್ತು. ಇದಲ್ಲದೆ ತಮ್ಮತಮ್ಮ ಕಲಸಗಳು ತಾನಾಗಿಯೇ ಬರುತ್ತಿದ್ದಕಾರಣ ಕೆಲಸವನ್ನು ತಿಳಿಯದ ಮೂರ್ಖನು ಆ ಕಾಲದಲ್ಲಿ ಇರಲೇಇಲ್ಲ. ಹೀಗೆ ಶಿಕ್ಷೆ ಇಲ್ಲದೆ ವಿಶೇಷ ಪರಿಶ್ರಮವೂ ಇಲ್ಲದೆ ತಮ್ಮ ಕರ್ಮಗಳು ತಮಗೆ ತಿಳಿದುಬರುತ್ತಿದ್ದಾಗ ಅವರೊಳಗೆ ಚುರುಕಾದ ಬುದ್ಧಿಯುಳ್ಳವನಿಗೆ ಅಧಿಕ ಉನ್ನತಿಯನ್ನು ಹೊಂದುವುದಕ್ಕೆ ಸಹಾಯವು ವಿಶೇಷವಾಗಿ ಆಯಾಸವಿಲ್ಲದೆ ದೊರಕುತ್ತಿದ್ದಿತು. ಈ ಪಥವಾದ ಪರಮ ಲಾಭವನ್ನು ತೊರೆದು ಜನ್ಮಾನುಸಾರ ಜಾತಿಭೇದವನ್ನು ಸ್ವೀಕರಿಸದೆ ಸಂಸರ್ಗಜನ್ಯವಾದ ಗುಣಕರ್ಮಗಳಿಗನುಸಾರವಾಗಿ ಜಾತಿಯನ್ನು ಸ್ವೀಕರಿಸುವದಾದರೆ, ದುರ್ನಿವಾರವಾದ ಉಚ್ಛೃಂಖಲಪ್ರವೃತ್ತಿಯು ಉಂಟಾಗುವದು. ಅದನ್ನು ವರ್ಣಿಸುವದಕ್ಕು ಆಗುವದಿಲ್ಲ. ನಿತ್ಯವೂ ಜಾತಿಸಂಬಂಧವಾದ ಕಲಹಗಳು ಹೊಸಹೊಸದಾಗಿ ಆರಂಭವಾಗುವವು.

ಜನ್ಮಾನುಸಾರ ಜಾತಿಯನ್ನು ಸ್ವೀಕರಿಸುವದರಲ್ಲಿ ಇನ್ನೊಂದು ಪರಮ ಲಾಭವುಂಟು. ಅವರವರ ಜಾತೀಯ ಕರ್ಮಗಳು ಇತರರ ದೃಷ್ಟಿಯಲ್ಲಿ ನೀಚವಾಗಿ ಕಂಡಾಗ್ಯೂ ಅವರಿಗೆ ಅದು ಕುಲದ ಕಸಬೆಂದು ಉತ್ತಮವಾಗಿಯೇ ಕಾಣುತ್ತಿತ್ತು. ಮತ್ತು ಅದನ್ನು ಮಾಡುವದರಲ್ಲಿ ಅವರಿಗೆ ಸಂತೋಷವೇ ಇರುವದು ಇತರರೂ ಕೂಡಾ ಅವರನ್ನು ಅಲಕ್ಷ್ಯದಿಂದ ಕಾಣುವದೂ ಇಲ್ಲ. ಇದನ್ನೆಲ್ಲವನ್ನೂ ಯೋಚಿಸದೆ ಈ ವರ್ಣವ್ಯವಸ್ಥೆಯಿಂದ ನಮ್ಮ ದೇಶಕ್ಕೆ

ಒಹಳ ಹಾನಿಯುಂಟಾಗಿರುವದೆಂದು ಕೆಲವರು ಹೇಳುತ್ತಿರುವರು. ಅವರು ಹೇಳುವದು ಕೇವಲ ಅಸಾರವೆಂಬಂಶವನ್ನು ಮುಂದೆ ತಿಳಿಸುತ್ತೇವೆ.

ಅವರು ತೋರಿಸುವ ಹಾನಿಯು ಕಾರಣಗಳು ಮತ್ತು ಅದರ ಅಸಾರತೆ.

೧. ಈ ವರ್ಣವ್ಯವಸ್ಥೆಯ ಕಾರಣದಿಂದ ನೀಚ ವರ್ಣದವರು ಏಳಿಗೆಗೆ ಬರುವದಕ್ಕೆ ಅವಕಾಶವಿಲ್ಲವಾಗಿದೆ. ಈ ಕಾರಣವು ಕೇವಲ ಭ್ರಮಮೂಲಕ ವಾದದ್ದು. ಏಕೆಂದರೆ ಇತರ ವರ್ಣದವರು ಅಭಿವೃದ್ಧಿಗೆ ಬರಲಾಗದೆಂಬ ನಿಷೇಧವು ವರ್ಣವ್ಯವಸ್ಥೆಯಲ್ಲಿ ಎಲ್ಲಿಯೂ ಕಂಡುಬರುವದಿಲ್ಲ. ಅಭಿವೃದ್ಧಿಯನ್ನು ಹೊಂದಬೇಕೆಂದು ಸಾಧನ ಮಾಡುವ ಪುರುಷನಿಗೆ ಪ್ರಪಂಚದಲ್ಲಿ ಅಸಂಭವವಾದದ್ದು ಯಾವದೂ ಇಲ್ಲ. ನಮ್ಮ ಧರ್ಮಗ್ರಂಥಗಳನ್ನು ವಿಚಾರಮಾಡಿ ನೋಡಿದರೆ ಶಬರಿಯೇ ಮೊದಲಾದ ಅನೇಕರು ಬ್ರಾಹ್ಮಣರಿಗಿಂತಲೂ ಹೆಚ್ಚಾದ ಗೌರವವನ್ನು ಪಡೆದಿರುವ ಸಂಗತಿಯು ಸ್ಪಷ್ಟವಾಗಿ ಕಂಡುಬರುವದು. ಪೂರ್ವಕಾಲದ ವಿಷಯವೇಕೆ? ಈ ಕಲಿಗಾಲದಲ್ಲಿಯೂ ಕಬೀರದಾಸ್, ತುಕಾರಾಮ್ ಇವರು ಶೂದ್ರವರ್ಣದಲ್ಲಿಯೇ ಉತ್ಪನ್ನರಾಗಿದ್ದು ಬಹು ಗೌರವವನ್ನು ಪಡೆದಿರುವರು. ಭೋಜ ಮಹಾರಾಜನು ಅತ್ಯಂತ ವಿದ್ಯಾಪ್ರಿಯನಾಗಿದ್ದುದಲ್ಲದೆ ಅವನ ರಾಜ್ಯದಲ್ಲಿ ಮೂರ್ಖರೂ ಯಾರೂ ಇರಲೇ ಇಲ್ಲವೆಂದು ಹೇಳುತ್ತಾರೆ. ಆದುದರಿಂದ ವರ್ಣವ್ಯವಸ್ಥೆಯು ಯಾರ ಅಭಿವೃದ್ಧಿಯ ವಿಷಯದಲ್ಲಿಯೂ ಬಾಧಕವಾಗಿಲ್ಲವೆಂಬುದು ಸ್ಪಷ್ಟವೇ.

೨. ಈ ವಿಧವಾದ ವರ್ಣವಿಭಾಗಗಳಿಂದ ಜಾತಿದ್ವೇಷವು ಹೆಚ್ಚುತ್ತಿರುವದು. ಒಂದು ದೊಡ್ಡ ದೋಷವೆಂತ ಹೇಳುತ್ತಾರೆ. ಈಗಿನ ಕಾಲದಲ್ಲಿ ಜಾತಿದ್ವೇಷವಿರುವದೆಂದು ನಾವೂ ಒಪ್ಪುತ್ತೇವೆ. ಆದರೆ ಇದು ವರ್ಣದ ಕಾರ್ಯವಲ್ಲ. ವರ್ಣವರ್ಣದಲ್ಲಿಯೂ ಗ್ರಾಮ ಗ್ರಾಮದಲ್ಲಿಯೂ ಮನೆ ಮನೆಯಲ್ಲಿಯೂ ಪರಸ್ಪರ ದ್ವೇಷವು ಕಂಡುಬರುತ್ತಲಿದೆ. ಇದಕ್ಕೂ ವರ್ಣವ್ಯವಸ್ಥೆಗೂ ಯಾವ ಸಂಬಂಧವೂ ಇರುವದಿಲ್ಲ ಹಾಗಲ್ಲದ ಪಕ್ಷದಲ್ಲಿ ಗ್ರಾಮಭೇದವು ಗೃಹಭೇದವೂ ದ್ವೇಷಕ್ಕೆ ಕಾರಣವಾಗಬೇಕಾಗುವುದು ಈ ಕಾಲದ ಜನರ ಸಭ್ಯತೆಯೇ ಈ ವಿಧವಾದುದೆಂದು ತಿಳಿಯಬೇಕಾಗಿದೆ. ಈಗಿನ ಸಭ್ಯ ಪುರುಷರಿಗೆ ತಮಗೆ ಸಮಾನರಾದ ಮತ್ತೊಬ್ಬರನ್ನು ಅಸಡ್ಡೆಯಾಗಿ ಕಾಣುವದೇ ಮೊದಲನೆಯ ನಿಯಮವಾಗಿ ಏರ್ಪಟ್ಟಿದೆ. ನಮ್ಮ ವರ್ಣಧರ್ಮವು ಈ ದ್ವೇಷಾಗ್ನಿಗೆ ಎಂದಿಗೂ ಕಾರಣವಲ್ಲ. ಭಾರತ ವರ್ಷದಲ್ಲಿ ಎಷ್ಟು ತಮ್ಮ ಜಾತಿಯಲ್ಲಿ ಪೂರ್ಣವಾದ ಅಭಿಮಾನವು ಪೂರ್ವದಲ್ಲಿಯಂತೆ ದೃಢ

ವಾಗಿ ಇದ್ದಿದ್ದರೆ ಇನ್ನೆಷ್ಟು ಅತ್ಯುನ್ನತವಾದ ಸ್ಥಿತಿಯಲ್ಲಿ ಈ ದೇಶವಿರುತ್ತಿತ್ತೊ ಹೇಳಲು ಸಾಧ್ಯವಲ್ಲ.

ವರ್ಣಧರ್ಮವೇ ಪರಸ್ಪರ ಕಲಹಕ್ಕೆ ಕಾರಣವಾಗುವ ಪಕ್ಷದಲ್ಲಿ ಪೂರ್ವ ಕಾಲದಲ್ಲಿ ಪರಸ್ಪರ ಪ್ರೇಮವು ದೃಢವಾಗಿ ಹೇಗಿರುತ್ತಿತ್ತು. ಇದೇ ಪರಸ್ಪರ ಕಲಹವನ್ನು ದೂರಮಾಡುವದಕ್ಕಾಗಿಯೇ ಪ್ರತಿಯೊಂದು ವರ್ಣಕ್ಕೂ ಬೇರೆ ಬೇರೆ ಸ್ವತಂತ್ರವಾದ ಧರ್ಮ ವ್ಯವಸ್ಥೆಯು ಏರ್ಪಡಿಸಲ್ಪಟ್ಟಿತ್ತು. ಒಬ್ಬ ಕೆಲಸಗಾರನೊಂದಿಗೆ ನಾವು ದ್ವೇಷಮಾಡಿದರೆ ನಮ್ಮ ವಿಷಯದಲ್ಲಿ ಅವನು ತನ್ನ ಕೆಲಸವನ್ನು ನಿಲ್ಲಿಸಿ ಬಿಡುವನು. ಅದರಿಂದ ನಮ್ಮ ಕೆಲಸವು ಕೆಟ್ಟುಹೊಗುವದೆಂದು ನಾವು ಅವನಲ್ಲಿಯು, ಅವನ ಕೆಲಸವು ಕೆಡುತ್ತದೆಂದು ಅವನು ನಮಲ್ಲಿಯೂ ಸೌಹಾರ್ದವನ್ನು ವಹಿಸಬೇಕಾಗುವುದು. ಈ ಕಾರಣದಿಂದ ಪರಸ್ಪರ ಪ್ರೀತಿಯು ಪೂರ್ಣರೂಪದಿಂದ ಇರುತ್ತಿತ್ತು.

೩. ಅಸ್ಪೃಶ್ಯಜಾತಿಯನ್ನು ಅತ್ಯಂತ ಬಹಿಷ್ಕರಿಸಿ ದೂರವಾಗಿಟ್ಟಿರುವ ಕಾರಣದಿಂದ ಆ ಜಾತಿಯವರು ನಮ್ಮನ್ನು ಬಿಟ್ಟು ಅನ್ಯತ್ರ ಹೋಗುತ್ತಲಿದಾರೆ. ಇದರಿಂದ ನಮ್ಮ ಜಾತಿಯವರ ಸಂಖ್ಯೆಯು ಬಹಳ ಕಡಿಮೆಯಾಗುತ್ತಲಿದೆ. ಇದು ವರ್ಣವ್ಯವಸ್ಥೆಯ ಮೂರನೇ ದೋಷವೆಂತ ಹೇಳುವರು.

ವಿಚಾರಮಾಡಿ ನೋಡಿದರೆ ಇದರಲ್ಲಿ ವರ್ಣವ್ಯವಸ್ಥೆಯ ಅಪರಾಧ ವೇನೂ ಕಂಡುಬರುವುದಿಲ್ಲ. ನಮ್ಮ ಪೂರ್ವದ ಮಹರ್ಷಿಗಳು ಸರ್ವ ವರ್ಣದವರು ಸರ್ವರನ್ನೂ ಸಮದೃಷ್ಟಿಯಿಂದ ನೋಡಬೇಕೆಂದು ಉಪದೇಶಿಸಿರುವರು.

" ವಿದ್ಯಾವಿನಯಸಂಪನ್ನೆ ಬ್ರಾಹ್ಮಣೇಗವಿ ಹಸ್ತಿನಿ |
ಶುನಿಚೈವ ಶ್ವಪಾಕೇಚ ಪಂಡಿತಾಸ್ಸಮದರ್ಶಿನಃ "

ವಿದ್ಯಾವಿನಯದಿಂದ ಕೂಡಿದ ಬ್ರಾಹ್ಮಣನಲ್ಲಿಯೂ ಹಸುವಿನಲ್ಲಿ ಆನೆಯಲ್ಲಿಯೂ ನಾಯಿಯಲ್ಲಿಯೂ ಶ್ವಪಚನಲ್ಲಿಯೂ ಸಹಾ ತಿಳಿದವರು ಸಮದೃಷ್ಟಿಯುಳ್ಳವರಾಗಿರುವರೆಂದು ಗೀತೆಯಲ್ಲಿ ಹೇಳಿರುವದು. ಮತ್ತು

" ಅಯಂನಿಜಃ ಪರೋವೇತಿ ಗಣನಾ ಲಘುಚೇತಸಾಂ |
ಉದಾರಚರಿತಾನಾಂತುವಸುಧೈವಕುಟುಂಬಕಂ "

ಅಲ್ಪ ಮನಸ್ಸುಳ್ಳವರಿಗೆ ತನ್ನವರು ಇತರರು ಎಂಬ ಭೇದವೇ ಹೊರತು ಉದಾರ ಮನಸ್ಸುಳ್ಳವರಿಗೆ ಪ್ರಪಂಚವೆಲ್ಲವೂ ತನ್ನ ಸಂಸಾರವೆ ಎಂದು ಉಪದೇಶಮಾಡಿರುವರು. ಈ ವಿಧವಾದ ಪ್ರಮಾಣಗಳು ಅನೇಕವ

ಳಿವೆ. ಈಗ ಈ ದೇಶದಲ್ಲಿ ಕಾಣುವ ಅನೈಯ್ಯಕ್ಕೆ ವರ್ಣಧರ್ಮವು ಕಾರಣವೆಂದು ಹೇಳಲಾಗುವುದಿಲ್ಲ. ಇದು ನಮ್ಮ ಜನರ ದೌರ್ಭಾಗ್ಯವೆಂದು ಹೇಳಬೇಕಾಗಿದೆ. ಸ್ಪೃಶ್ಯಾಸ್ಪೃಶ್ಯವಿಚಾರವು ವೈಜ್ಞಾನಿಕವಿಧಿಯನ್ನನುಸರಿಸಿ ಏರ್ಪಡಿಸಲ್ಪಟ್ಟಿದೆ. ಇದು ಒಂದು ದ್ವೇಷದಿಂದ ಉಂಟಾದುದಲ್ಲ. ನಮ್ಮ ಮನೆಯಲ್ಲಿಯೂ ಸಹ ಜಾತಾಶೌಚ ಮೃತಾಶೌಚಗಳಲ್ಲಿ ನಮ್ಮ ಸಮೀಪಬಂಧುಗಳನ್ನು ಸ್ಪರ್ಶಮಾಡುವದಿಲ್ಲ. ಸ್ತ್ರೀಯು ಮಗಳಾಗಲಿ ಪತ್ನಿಯಾಗಲಿ ರಜಸ್ವಲೆಯಾದರೆ ಅವಳನ್ನು ಸ್ಪರ್ಶಮಾಡುವದಿಲ್ಲ. ಇದರಿಂದ ಅವರು ನಮ್ಮನ್ನು ದ್ವೇಷಿಸುವದಾಗಲಿ ಅವರಲ್ಲಿ ನಮ್ಮ ಪ್ರೀತಿಗೆ ಕುಂದಕವಾಗಲಿ ಇರುವದಿಲ್ಲ. ಆದುದರಿಂದ ಅಸ್ಪೃಶ್ಯತೆಯು ದ್ವೇಷವನ್ನು ಹುಟ್ಟಿಸತಕ್ಕದ್ದಲ್ಲ. ಕೆಲವು ಮಹನೀಯರು ತಮ್ಮ ಸ್ವಾರ್ಥಸಾಧನೆಗಾಗಿ ಬಹುದೂರದೃಷ್ಟಿಯಿಂದ ಮಹರ್ಷಿಗಳು ಏರ್ಪಡಿಸಿರುವ ನಿಯಮಗಳಿಗೆ ಅಪಾರ್ಥವನ್ನು ಕಲ್ಪಿಸಿ ಸ್ವವ್ಯೂಹದಲ್ಲಿ ದ್ವೇಷವನ್ನುಂಟುಮಾಡುತಲಿದ್ದಾರೆ. ಇದನ್ನರಿಯದೆ ಮರುಳಾಗುವುದು ನಮ್ಮ ದೌರ್ಭಾಗ್ಯವಲ್ಲವೆ? ವರ್ಣಭೇದವಿಲ್ಲದವರಲ್ಲಿಯೂ ಮಲನಿರ್ಹರಣಾದಿಕಾರ್ಯಗಳನ್ನು ಮಾಡುವ ಜನರನ್ನು ಅಸ್ಪೃಶ್ಯರನ್ನಾಗಿಯೇ ನೋಡುತ್ತಿರುವರು. ಸಾಂಕ್ರಾಮಿಕ ರೋಗದಲ್ಲಿರುವವರನ್ನು ಅಸ್ಪೃಶ್ಯರನ್ನಾಗಿ ಎಣಿಸುವರು. ಇದರಿಂದ ಒಬ್ಬರಲ್ಲೊಬ್ಬರಿಗೆ ದ್ವೇಷ ಬರುವುದಿಲ್ಲವೆ? ಆದರೆ ಇಂತಹದು ಯಾರಿಗೂ ನಿವಾರಣೀಯವಲ್ಲರೆಂದು ಸಮಾಧಾನಪಡುವುದುತ್ತಮವು.

೪. ಒಂದು ವರ್ಣದವನು ಇನ್ನೊಂದು ವರ್ಣದಲ್ಲಿ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವದಕ್ಕೆ ಈ ವರ್ಣವ್ಯವಸ್ಥೆಯು ಅವಕಾಶವನ್ನು ಕೊಡುವದಿಲ್ಲ. ಇದು ನಾಲ್ಕನೇ ದೋಷ. ಆದರೆ ಈಗಿನ ಸ್ಥಿತಿಯಲ್ಲಿ ವ್ಯವಹಾರವೇನೋ ಹೀಗೆಯೇ ಇರುವದು. ಪೂರ್ವಕಾಲದಲ್ಲಿ ಬ್ರಾಹ್ಮಣನು ನಾಲ್ಕು ವರ್ಣಗಳಲ್ಲಿಯೂ, ಕ್ಷತ್ರಿಯನು ಬ್ರಾಹ್ಮಣ ವರ್ಣವನ್ನು ಬಿಟ್ಟು ಉಳಿದ ಮೂರು ವರ್ಣಗಳಲ್ಲಿಯೂ, ಕನ್ಯೆಯನ್ನು ತರುತ್ತಿದ್ದರು ಆಗ ಪಾಪಭೀತಿಯೂ ಧರ್ಮಶ್ರದ್ಧೆಯೂ ಸರವೂರ್ಣವಾಗಿ ಸಕಲರ ಹೃದಯದಲ್ಲಿ ಬೇರೂರಿತ್ತಾದಕಾರಣ ಯಾವ ವಿಧವಾದ ಸಾಂಕರ್ಯಕ್ಕು ಅವಕಾಶವಿಲ್ಲದಂತೆ ಧರ್ಮಲೋಪ ಬರದಂತೆ ನಡೆಯುವ ಚಿತ್ತಸ್ಥೈರ್ಯವು ಕಾಲ ಮಹಿಮೆಯಿಂದಲೂ ಅವರ ಧರ್ಮಬಲದಿಂದಲೂ ಇರುತ್ತಿತ್ತು. ಆದರೂ ನಿಕೃಷ್ಟ ವರ್ಣದವರು ಉತ್ತಮ ವರ್ಣದ ಕನ್ಯೆಯನ್ನು ಮಾತ್ರ ತರುತ್ತಿರಲಿಲ್ಲ. ವಿವಾಹವೂ ಮೈತ್ರಿಯೂ ವೈರವೂ ಸಮಾನಕುಲದಲ್ಲಿಯೂ

ಸಮಾನ ಧನವುಳ್ಳವರಲ್ಲಿಯೂ ಲಾಭದಾಯಕವಾಗುವದೆಂದು ತಿಳಿದವರು ಹೇಳುವರು. ನಮ್ಮ ಅನುಭವದಲ್ಲಿಯೂ ಇದೇ ಉಚಿತವೆಂದು ಕಂಡುಬರುವದು. ಅವಶ್ಯಕತೆಯುಂಟಾದಾಗ ತನಗಿಂತ ಕೆಳಗಿನ ಸ್ಥಿತಿಯಲ್ಲಿರತಕ್ಕವರೊಂದಿಗೆ ಈ ಸಂಬಂಧಗಳನ್ನು ಬೆಳಸಿದರೂ ಬಾಧಕವಿಲ್ಲ. ತನಗಿಂತಲೂ ಮೇಲಿನ ಸ್ಥಿತಿಯುವರೊಂದಿಗೆ ಈ ಮೂರು ಸಂಬಂಧಗಳನ್ನು ಮಾಡಿದ ಪಕ್ಷದಲ್ಲಿ ಹಾನಿ ಹೊರತು ಲಾಭವೇನೂ ಇರುವದಿಲ್ಲ ಇದನ್ನು ಸಕಲರೂ ಅನುಭವಿಸುತ್ತಲೇ ಇರುವರು. ನಮ್ಮ ಜಾತಿಯಲ್ಲಿ ತಮ್ಮ ತಮ್ಮ ವರ್ಣದಲ್ಲಿಯೇ ವಿವಾಹ ಮಾಡುವ ಪದ್ಧತಿಯು ಇಲ್ಲದೇ ಇದ್ದಿದ್ದ ಪಕ್ಷದಲ್ಲಿ ಇದರಗತಿ ಏನಾಗುತ್ತಿತ್ತೆಂಬುವದನ್ನು ನಾವು ಬಾಯಿಯಿಂದ ಹೇಳಲಾರೆವು ಇಷ್ಟು ನಿಯಮಗಳಿದ್ದಾಗ್ಯೂ ನಮ್ಮ ಸಹೋದರರುಗಳು ಈ ಮಾಯಾಜಾಲಕ್ಕೆ ಸಿಲುಕಿ ಭ್ರಷ್ಟರಾಗುತ್ತಿರುವದನ್ನು ನಾವು ನೋಡುತ್ತಲೇ ಇದ್ದೇವೆ. ಈ ನಿಯಮವೂ ಇಲ್ಲದೆ ಇದ್ದಿದ್ದರೆ ನಮ್ಮ ಜಾತಿಯು ವರ್ಣಸಾಂಕರ್ಯದಿಂದ ತುಂಬಿಹೋಗುತ್ತಿತ್ತು. ಅದರಿಂದುಂಟಾಗುವ ಹಾನಿಯೂ ಕೂಡ ಅನಿರ್ವಚನೀಯವಾಗುತ್ತಿತ್ತು.

೫. ಈ ವರ್ಣಭೇದದ ಕಾರಣವಾಗಿ ನಾವೆಲ್ಲರೂ ಐಕಮತ್ಯವನ್ನು ಹೊಂದಿ ಯಾವ ಕೆಲಸವನ್ನು ಮಾಡುವದಕ್ಕೂ ಸಾಧ್ಯವಿಲ್ಲವಾಗಿದೆ. ಇದು ಐದನೆಯ ದೋಷ. ಇದು ವೃಥಾ ಆಕ್ಷೇಪ ಎಂದು ತೋರುತ್ತದೆ. ಮಹಾಭಾರತಾದಿ ಪ್ರಾಚೀನ ಗ್ರಂಥಗಳನ್ನು ಪರಿಶೀಲಿಸಿದರೆ ಆಗಿನ ರಾಜರ ದರ್ಬಾರಿನಲ್ಲಿ ಸರ್ವ ವರ್ಣದವರೂ ಸಮ್ಮತಿಯನ್ನು ಕೊಡುವುದರಲ್ಲಿಯೂ ನ್ಯಾಯ ವಿಚಾರದಲ್ಲಿಯೂ ಸೇರುತ್ತಿದ್ದುದು ಕಂಡುಬರುತ್ತದೆ. ಈಗಲೂ ಜಾತ್ರೆ ಮೊದಲಾದುವುಗಳಲ್ಲಿಯೂ ಪುರಾಣ ಕಥೆಗಳಲ್ಲಿಯೂ ಸಕಲ ವರ್ಣದವರೂ ಸೇರಿ ದೇವತಾ ಸೇವೆಗಳನ್ನು ಮಾಡುತ್ತಿರುವದು ತಿಳಿಯದ ಹೊಸವಿಷಯವಲ್ಲ ಆದುದರಿಂದ ವರ್ಣವ್ಯವಸ್ಥೆಯು ಐಕಮತ್ಯಕ್ಕೆ ಸಾಧಕವೇ ಹೊರತು ಬಾಧಕವಲ್ಲ

೬. ಈ ವ್ಯವಸ್ಥೆಯಿಂದ ನಮ್ಮ ಜಾತಿಯಲ್ಲಿ ಅನೇಕ ದುರಾಚಾರಗಳು ಪ್ರಚಲಿತಗಳಾಗಿ ಬಾಲ್ಯವಿವಾಹ, ವಿಧವಾವಿವಾಹದ ನಿಷೇಧ ಮೊದಲಾದವುಗಳು ಉಂಟಾಗಿರುವದು. ಇದು ಆರನೆಯ ದೋಷ ವರ್ಣ ಧರ್ಮಕ್ಕೂ ಇದಕ್ಕೂ ಸಂಬಂಧವೇನೂ ಇರುವದಿಲ್ಲ. ಜಾತಿಭೇದದಿಂದ ಇವುಗಳು ಸೃಷ್ಟಗಳಾಗಿಲ್ಲ. ವಿವಾಹವೆಂಬುವದು ಧರ್ಮಾಚರಣೆಗೂ ಕುಲತಂತುವನ್ನು ನಿಲ್ಲಿಸುವುದಕ್ಕು ಏರ್ಪಟ್ಟದ್ದೇ ಹೊರತು ಕ್ಷುದ್ರವಾದ ಕಾಮಸುಖಕ್ಕಾಗಿ ಏರ್ಪಟ್ಟದ್ದಲ್ಲ. ಗೃಹಸ್ಥ

ಧರ್ಮಾಚರಣೆಯು ಪತ್ನಿಯಿಲ್ಲದೆ ನಿರ್ವಹಿಸಲಸಾಧ್ಯವಾದದ್ದರಿಂದ ಪುರುಷನಿಗೆ ವಿವಾಹವು ಏರ್ಪಟ್ಟಿತು. ಪರದಲ್ಲಿ ಸದ್ಗತಿಯನ್ನು ಹೊಂದಲಭಿಲಾಷೆಯುಳ್ಳವರು ಐಹಿಕವಾದ ಕ್ಷುದ್ರಸುಖಗಳಿಗೆ ಮನವನ್ನು ಕೊಡಕೂಡದು. "ಬ್ರಾಹ್ಮಣಸ್ಯ ಚ ದೇಹೋಯಂ ಕ್ಷುದ್ರಕಾಮಾಯ ನೇಷ್ಯತೇ | ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ" ಇಹಲೋಕದಲ್ಲಿ ಸುಖಾನುಭವಕ್ಕೋಸ್ಕರ ಬ್ರಾಹ್ಮಣ ದೇಹವು ಏರ್ಪಟ್ಟದ್ದಲ್ಲ. ಇಲ್ಲಿ ಕಷ್ಟವನ್ನನುಭವಿಸಿ ತಪಸ್ಸು ಮಾಡುವದಕ್ಕೂ ಲೋಕಾಂತರದಲ್ಲಿ ಶಾಶ್ವತ ಸುಖವನ್ನನುಭವಿಸುವುದಕ್ಕೂ ಏರ್ಪಟ್ಟದ್ದು. ಆದುದರಿಂದಲೇ ಬ್ರಾಹ್ಮಣರಲ್ಲಿ ವಿಧವಾ ವಿವಾಹಾದಿಗಳು ನಿಷಿದ್ಧವಾಗಿರುವಷ್ಟು ಇತರ ವರ್ಣಗಳಲ್ಲಿರುವದಿಲ್ಲ.

ಬಾಲ್ಯ ವಿವಾಹವೆಂದರೆ ೧೦ ನೆಯ ವಯಸ್ಸಿನೊಳಗಾಗಿ ಹೆಂಗಸಿಗೆ ವಿವಾಹ ಮಾಡುವ ಕ್ರಮವನ್ನು ಶಾಸ್ತ್ರವು ವಿಧಿಸಿರುವುದು. ಇದು ಬಹಳ ದೀರ್ಘವಾದ ಆಲೋಚನೆಯಿಂದ ಪೂರ್ವಾಪರಜ್ಞರಾಗಿ ದೇಶಹಿತದಲ್ಲಿ ಬದ್ಧಾದರರಾದ ಮಹಾತ್ಮರುಗಳಿಂದ ಏರ್ಪಡಿಸಲ್ಪಟ್ಟಿರುವದು. ಪ್ರಾಪ್ತವಯಸ್ಕಳಾದ ಕನ್ಯೆಯು ತಾತ್ಕಾಲಿಕ ಸುಖದಲ್ಲಿ ಆಸೆಯುಳ್ಳವಳಾಗಿ ಅವಿವೇಕಕ್ಕೆ ಆಕರವಾದ ಪ್ರಾಯದಲ್ಲಿ ಸಿಲುಕಿದಾಗ ಮುಂದೆ ಬರುವ ಅರ್ಥಾನರ್ಥಗಳನ್ನು ಊಹಿಸಿ ತಿಳಿಯುವಷ್ಟು ಅನುಭವವನ್ನು ಬುದ್ಧಿಯನ್ನು ಹೊಂದಿರುವದಿಲ್ಲವಾದ್ದರಿಂದ ತಾಯಿತಂದೆಗಳು ಪರ್ಯಾಲೋಚಿಸಿ ತಾತ್ಕಾಲಿಕ ಸುಖಸಾಧನಗಳಲ್ಲಿ ದೃಷ್ಟಿ ಇಡದೆ ಭವಿಷ್ಯತ್ತಿನಲ್ಲಿ ಸುಖಸೌಭಾಗ್ಯಗಳುಂಟಾಗುವಂತೆ ವಿವಾಹವನ್ನು ಏರ್ಪಡಿಸುವರು. ಕನ್ಯೆಯು ಪಿತೃಗೃಹದಲ್ಲಿ ಬೆಳೆದು ವಯಸ್ಸಿಗೆ ಬಂದಮೇಲೆ ಪತಿಗೃಹಕ್ಕೆ ಕಾಲಿಟ್ಟರೆ ಅಲ್ಲಿಯ ಅನುಭವವನ್ನು ತೆಗೆದುಕೊಳ್ಳುವದು ಕಷ್ಟವಾಗುವುದರಿಂದ ಗೃಹಕ್ಕೆ ಸ್ವಾಮಿನಿಯಾಗುವ ವಯಸ್ಸು ಬರುವುದಕ್ಕೆ ಮೊದಲೇ ವಿವಾಹಿತಳಾಗಿ ಪತಿಗೃಹದಲ್ಲಿದ್ದು ಅಲ್ಲಿಯ ಸಂಪ್ರದಾಯಗಳನ್ನು ಸಮಯಾಚಾರಗಳನ್ನು ಅನುಭವಕ್ಕೆ ತೆಗೆದುಕೊಳ್ಳುತ್ತಾ ಇದ್ದು ಅನಂತರ ಮನೆಯ ಯಜಮಾನಿಯಾಗಿ ಕಾರ್ಯ ನಿರ್ವಹಣ ಮಾಡಲು ಸಮರ್ಥಳಾಗುವಳೆಂಬ ಅಭಿಪ್ರಾಯವನ್ನಿಟ್ಟು ಈ ರೀತಿ ಬಾಲ ವಿವಾಹವು ಏರ್ಪಟ್ಟಿರುವದು. ಇದೇ ಶ್ರೇಯಸ್ಕರವೇ ಹೊರತು ಇನ್ನಾವ ವಿಧದಲ್ಲಿ ಇದನ್ನು ತಿರುಗಿಸಿದರೂ ಸಂಸಾರದಲ್ಲಿ ಸುಖವಿರುವದಿಲ್ಲ. ಇದು ಖಂಡಿತ. ಆದುದರಿಂದ ವರ್ಣದ ಧರ್ಮಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ.

೭. ಈ ವರ್ಣವ್ಯವಸ್ಥೆಯ ಕಾರಣದಿಂದ ಹಿಂದೂ ಜಾತಿಯಲ್ಲಿ ಸ್ವಾತಂತ್ರ್ಯವು ತಪ್ಪಿ ತನ್ನ ಮನಬಂದಂತೆ ಸ್ವತಂತ್ರವಾಗಿ ನಡೆಯುವದಕ್ಕೆ ಅವಕಾಶವಿರುವದಿಲ್ಲ. ಇದು ಏಳನೆಯ ದೋಷ. ವಿಚಾರಮಾಡಿ ನೋಡಿದರೆ ಪ್ರಪಂಚದಲ್ಲಿ ಯಾವ ಜಾತಿಯಲ್ಲಿ ನೋಡಿದಾಗ್ಯೂ ನಿಯಮಬದ್ಧರಾಗಿ ಕೆಲಸಮಾಡುವ ನಡತೆಯೇ ಕಂಡುಬರುವದು. ನಿಯಮವನ್ನಿಟ್ಟುಕೊಂಡು ಕೆಲಸಮಾಡುವದು ಲಾಭಕರವೇ ? ವ್ಯವಸ್ಥೆಯಿಲ್ಲದೆ ಕೆಲಸಮಾಡುವದು ಲಾಭಕರವೇ ? ಎಂಬುದನ್ನು ಯೋಚಿಸಿ ನೋಡಿದರೆ ನಿಯಮಾನುಕೂಲವಾದ ಕೆಲಸವೇ ಲಾಭದಾಯಕವೆಂದು ಸ್ಪಷ್ಟಪಡುವದು.

೮. ಪೂರ್ವಕಾಲದ ಬ್ರಾಹ್ಮಣರುಗಳು ತಮ್ಮ ಸ್ವಪ್ರಯೋಜನಕ್ಕಾಗಿ ವರ್ಣವ್ಯವಸ್ಥೆಯ ನಿಯಮಗಳನ್ನು ಇಷ್ಟು ಕಠಿನವಾಗಿ ಮಾಡಿಟ್ಟಿರುವರು. ಈ ವಿಷಯದಲ್ಲಿ ಇವರು ಬಹು ಪಕ್ಷಪಾತವನ್ನು ತೋರಿಸಿರುವರು. ತಮ್ಮನ್ನು ಎಲ್ಲರಿಗಿಂತಲೂ ಶ್ರೇಷ್ಠರನ್ನಾಗಿ ಮಾಡಿಕೊಂಡು ಉಳಿದ ವರ್ಣಗಳನ್ನೆಲ್ಲಾ ತಮಗೆ ದಾಸರನ್ನಾಗಿ ಮಾಡಿಕೊಂಡಿರುವರು. ಇದು ಎಂಟನೇ ದೋಷ. ಇದು ವಿಚಾರವಿಲ್ಲದ ಆಕ್ಷೇಪವಾಗಿರುವದು. ಈಗಲೂ ನಾವು ನೋಡುವ ಹಾಗೆ ಪರಮಾತ್ಮನಲ್ಲಿ ಭಕ್ತಿಯನ್ನಿಟ್ಟಿರತಕ್ಕವನು ಯಾವ ವರ್ಣದವನಾದಾಗ್ಯೂ ಅವನನ್ನು ಎಲ್ಲರೂ ಆದರಿಸಿ ಸತ್ಕರಿಸುವರು. ಬ್ರಾಹ್ಮಣನು ಸಾಂಸಾರಿಕ ಸಮಸ್ತ ಭೋಗಗಳನ್ನೂ ಬಿಟ್ಟು ಲಾಭಕರವಾದ ಸಮಸ್ತ ಕೆಲಸಗಳನ್ನೂ ಇತರ ವರ್ಣದವರಿಗೆ ವಹಿಸಿ ಸಕಲ ಪ್ರಯೋಜನಗಳನ್ನೂ ಇತರರೇ ಅನುಭವಿಸಲೆಂದು ಸಂತುಷ್ಟಚಿತ್ತನಾಗಿ ರಾತ್ರಿ ಹಗಲೂ ಕೇವಲ ಭಗವದುಪಾಸನೆಯಲ್ಲಿಯೇ ನಿಮಗ್ನನಾಗಿರುತ್ತಿದ್ದನು. ಹೀಗಿರುವಲ್ಲಿ ಅವನನ್ನು ಏಕೆ ಹೆಚ್ಚಾಗಿ ಆದರಿಸಬಾರದು ? ಇತರ ವರ್ಣದವನಾದಾಗ್ಯೂ ಈ ಮಾರ್ಗವನ್ನವಲಂಬಿಸಿದರೆ ಕಬೀರ, ತುಕಾರಾಂ ಮೊದಲಾದವರಂತೆ ಆದರ ಸತ್ಕಾರಗಳಿಗೆ ಪಾತ್ರನಾಗಿರುವದು ನಮಗೆ ತಿಳಿದುಬಂದಿಲ್ಲವೇ ? ಬ್ರಾಹ್ಮಣರು ತಮ್ಮನ್ನು ಎಲ್ಲರಿಗಿಂತಲೂ ಶ್ರೇಷ್ಠರೆಂದು ತಿಳಿದುಕೊಂಡಿಲ್ಲ. ತಾವು ಮಾಡುತ್ತಿರುವ ದೈವಭಜನಾದಿ ಕಾರ್ಯಗಳು ಶ್ರೇಷ್ಠವೆಂದು ತಿಳಿದುಕೊಂಡಿರುವರು. ಅದರನ್ನು ಮಾಡದಿರುವವರನ್ನು ತಮ್ಮಗೆ ಸಮರೆಂದು ತಿಳಿಯುವುದಿಲ್ಲ. ಇಷ್ಟು ಮಾತ್ರದಿಂದಲೇ ಅವರು ಯಾವ ಪಾಪವನ್ನೂ ಮಾಡಿದಹಾಗಾಗಲಿಲ್ಲ. ಅವರು ಅದಕ್ಕೆ ಅರ್ಹರಾಗಿಯೇ ಇರುವರು. ಮತ್ತು ಬ್ರಾಹ್ಮಣರಿಗೋಸ್ಕರ ಯಾವ ನಿಯಮವನ್ನು ಏರ್ಪಡಿಸಿ

ದ್ದರೋ ಅದನ್ನು ನಡೆಸುವದು ಸುಲಭಸಾಧ್ಯವಾಗಿರಲಿಲ್ಲ. ಅದು ಅವರಿಗೆ ಸಾಹಸವೇ ಆಗಿತ್ತು. ಸಂಸಾರದ ಸರ್ವ ಸುಖಗಳನ್ನೂ ತ್ಯಾಗಮಾಡಿ ನಿರ್ಜನ ವನಗಳಲ್ಲಿಯೂ ಬೆಟ್ಟಗಳಲ್ಲಿಯೂ ವಾಸಮಾಡುತ್ತಾ ನಾನಾವಿಧ ತೊಂದರೆಗಳೆನ್ನು ಸಹಿಸಿಕೊಂಡು ಪ್ರಪಂಚಕ್ಕೆ ಉಪಕಾರಮಾಡುವ ಉದ್ಯೋಗವು ಸಾಮಾನ್ಯವಾದುದಲ್ಲ. ಅವರಿಗೆ ಅಪೇಕ್ಷೆಯಿದ್ದರ ತಮ್ಮ ತಪೋಬಲದಿಂದ ಯಾವುದನ್ನು ಬೇಕಾದರೂ ಮಾಡಲು ಸಮರ್ಥರಾಗಿದ್ದರು. ಪರಶುರಾಮನು ಸಮಸ್ತ ರಾಜ್ಯವನ್ನೂ ಬ್ರಾಹ್ಮಣರಿಗೆ ಕೊಟ್ಟಿದ್ದನು. ಅವರಿಷ್ಟಪಟ್ಟಿದ್ದರೆ ರಾಜ್ಯವನ್ನು ಸ್ವಯಂ ಅನುಭವಿಸಬಹುದಾಗಿತ್ತು. ಬ್ರಾಹ್ಮಣರ ಯಾವ ಯಾವ ಗುಣಗಳನ್ನು ಪ್ರಶಂಸೆ ಮಾಡೋಣ. ತಾವು ಸ್ವಯಂಶಕ್ತಿ ಸಂಪನ್ನರಾಗಿದ್ದರೂ ಎಷ್ಟು ನಿಸ್ಪೃಹರಾಗಿದ್ದರು ಎಂಬ ಅಂಶವನ್ನು ಈ ಕೆಳಗಿನ ಶ್ಲೋಕದಿಂದ ಊಹಿಸಿ ತಿಳಿದುಕೊಳ್ಳಬಹುದು.

"ಉಪಲಶಕಲಮೇತದ್ಭೇದಕಂಗೋಮಯಾನಾಂ |
ವಟುಭಿರುಪಹೃತಾನಾಂಬರ್ಹಿಷಾಂಸ್ತೂಪಮೇತತ್ ||
ಶರಣಮಪಿಸಮಿದ್ಭಿಶ್ಶುಷ್ಯಮಾಣಾಭಿರಾಭಿಃ |
ವಿನಮಿತಪಟಲಾಂತಂ ದೃಶ್ಯತೇಜೀರ್ಣಕುಡ್ಯಂ" ||೧||

ಒಣಗಿದ ಕಾಡು ಬೆರಣಿಗಳನ್ನು ಒಡೆಯುವುದಕ್ಕಾಗಿ ಇಟ್ಟಿರುವ ಕಲ್ಲು ಇಲ್ಲಿ ಬಿದ್ದಿರುವುದು. ಶಿಷ್ಯರುಗಳು ತಂದಿರುವ ದರ್ಭೆಯ ಹೊರೆಯು ಇಲ್ಲಿರಿಸಿರುವುದು ಒಣಗಿಸುವುದಕ್ಕೋಸ್ಕರ ಇಟ್ಟಿರುವ ಸಮಿತ್ತುಗಳ ಭಾರದಿಂದ ಸೂರು ಬಗ್ಗಿರುವುದು. ಈ ಮನೆಯು ಮಹಾ ರಾಜಾಧಿರಾಜನಾದ ಚಂದ್ರಗುಪ್ತನ ಮಹಾ ಮಂತ್ರಿಯಾದ ಮಹಾತ್ಮನಾದ ಚಾಣಕ್ಯನೆಂಬ ಬ್ರಾಹ್ಮಣನ ಮನೆಯು. ಬ್ರಾಹ್ಮಣರ ನಿಸ್ಪೃಹತೆಯು ಎಷ್ಟರಮಟ್ಟಿನದೆಂಬುವುದನ್ನು ಇದುಒಂದರಿಂದಲೇ ಸ್ಪಷ್ಟವಾಗಿ ತಿಳಿಯಬಹುದು. ಅಲ್ಲದೆ ಪ್ರಪಂಚದಲ್ಲೆಲ್ಲವೂ ಪೂಜ್ಯರಾಗಬೇಕಾದ ಗುಣಗಳು ಬ್ರಾಹ್ಮಣರಲ್ಲಿ ಹೇಗಿದ್ದುವೆಂಬಂಶವನ್ನು ಸಹ ನೀವೇ ವಿಚಾರಮಾಡಿ ತಿಳಿಯಬಹುದು. ಈ ಗುಣಗಳು ಒಬ್ಬಿಬ್ಬರಲ್ಲರಲ್ಲಿಲ್ಲ. ಪ್ರಾಯಶಃ ಬ್ರಾಹ್ಮಣರಲ್ಲೆಲ್ಲರಲ್ಲಿಯೂ ಇದ್ದುವು ಕೌರವ ಪಾಂಡವರ ಗುರುಗಳಾದ ದ್ರೋಣಾ ಚಾರ್ಯರನ್ನು ಕೇಳಿರಬಹುದು. ಅವರ ಬಲವೂ ಅವರ ಗುಣಗಳೂ ಜಗದ್ವಿಖ್ಯಾತವಾಗಿದ್ದುವು. ಇಷ್ಟಿದ್ದರೂ ತನ್ನ ಮಗನಿಗೆ ಹಾಲು ಕೊಡುವುದಕ್ಕೆ ಒಂದು ಹಸುವನ್ನು ಒಬ್ಬರನ್ನು ಕೇಳುವುದಕ್ಕೆ ಇಷ್ಟ

ವಿಲ್ಲದೆ ಹಾಲಿಗೆ ಬದಲಾಗಿ ಅಕ್ಕಿಯನ್ನು ನೀರಿನಲ್ಲಿ ಅರೆದು ಕೊಟ್ಟರೆಂದು ಭಾರತದಿಂದ ತಿಳಿಯಬರುತ್ತದೆ. ಈ ರೀತಿಯಲ್ಲಿ ಒಬ್ಬರಿಗೂ ಒಂದು ತೊಂದರೆಯನ್ನೂ ಕೊಡದೆ ತಾವು ಕಷ್ಟಸಹಿಷ್ಣುಗಳಾಗಿ ಲೋಕೋಪಕಾರಗಳಲ್ಲಿ ನಿರತರಾಗಿದ್ದವರ ವಿಷಯದಲ್ಲಿ ನಾವುಮಾತ್ರವಲ್ಲ, ವಿದೇಶಿಗಳೂ ಅನ್ಯಮತಾವಲಂಬಿಗಳೂ ಸಹ ಅವರ ಪ್ರಶಂಸೆಯನ್ನು ಮಾಡುತ್ತಿರುವರು. ಮತ್ತು ಅವರು ತಮ್ಮ ಸಂತತಿಯವರಿಗಾಗಿ ಎಷ್ಟು ಕಠೋರವಾದ ನಿಯಮವನ್ನು ಮಾಡಿಟ್ಟಿರುವರೆಂಬುದನ್ನು ನೋಡಿರಿ.

ಅವ್ರತಾಶ್ಚಾನಧೀಯಾನಾಃ ಯತ್ರಭೈಕ್ಷ್ಯಚರಾದ್ವಿಜಾಃ |
ತಂದೇಶಂದಂಡಯೇದ್ರಾಜಾ ಚೋರಭಕ್ತಪ್ರದೋಹಿಸಃ ||

ಇದು ವಸಿಷ್ಠರ ವಾಕ್ಯವು. ಯಾವ ದೇಶದಲ್ಲಿ ವ್ರತವನ್ನಾಚರಿಸದೆ ವೇದಪಾಠವನ್ನು ಮಾಡದೆ ಬ್ರಾಹ್ಮಣರು ಭಿಕ್ಷೆಯನ್ನು ಹೊಂದುವರೋ ಆ ದೇಶದವರನ್ನು ರಾಜನು ದಂಡಿಸಬೇಕು. ಏಕೆಂದರೆ? ಆ ದೇಶವು ಕಳ್ಳರಿಗೆ ಆಶ್ರಯವಾಗಿರುವುದು. ತಾತ್ಪರ್ಯವೇನೆಂದರ ಬ್ರಾಹ್ಮಣನು ತನ್ನ ಕರ್ತವ್ಯವನ್ನು ಬಿಟ್ಟು ನಡೆಯುವುದಾದರೆ ಅವನು ಸರ್ವಥಾ ತ್ಯಾಜ್ಯನು. ಮತ್ತು ದಂಡಾರ್ಹನು. ಹಾಗೆಯೇ ಆ ಬ್ರಾಹ್ಮಣನಿರುವ ದೇಶವೂ ಸಹ ದಂಡನೀಯವಾದುದು ಎಂದು ಈ ಶ್ಲೋಕದ ತಾತ್ಪರ್ಯವು ಇದೊಂದರಿಂದಲೇ ಬ್ರಾಹ್ಮಣರ ಧರ್ಮ ನಿಯಮಗಳು ಚನ್ನಾಗಿ ತಿಳಿದುಬರುವುವು. ಒಂದುವೇಳೆ ಬ್ರಾಹ್ಮಣರು ದಾನವನ್ನು ತೆಗೆದುಕೊಳ್ಳುವ ಅಧಿಕಾರವುಳ್ಳವರಾಗಿರುವುದರಿಂದ ಸ್ವಾರ್ಥಪರಾಯಣರೆಂತಲೂ, ಕಪಟಿಗಳೆಂತಲೂ ಅವರನ್ನು ಹೇಳುವುದಾದರ ಅದೇ ಬ್ರಾಹ್ಮಣರು ದಾನವನ್ನು ತೆಗೆದುಕೊಳ್ಳುವುದು ಮಹಾನೀಚವೃತ್ತಿಯೆನ್ನುತ್ತಿರುವರು. ದಾನವನ್ನು ತೆಗೆದುಕೊಳ್ಳತಕ್ಕವನು ಪ್ರತಿಷ್ಠಿತನಲ್ಲವೆಂದು ಬ್ರಾಹ್ಮಣ ಸಮಾಜದಲ್ಲಿ ವ್ಯವಹರಿಸಲ್ಪಡುತ್ತಲಿದೆ. ಒಬ್ಬರು ಇನ್ನೊಬ್ಬರ ಚಾಕರಿಯನ್ನು ಮಾಡಿ ಅದಕ್ಕೆ ಒಂದು ಪುರಸ್ಕಾರವನ್ನು ಹೊಂದಿದರ ಹಾಗೆ ಪುರಸ್ಕಾರ ಹೊಂದಿದವರನ್ನು ಸ್ವಪ್ರಯೋಜನ ಪರರೆಂತಲೂ, ಕಪಟಿಗಳೆಂತಲೂ ಹೇಳಬಹುದೇ? ಲೋಕಸೇವೆಯನ್ನು ಮಾಡುವುದಕ್ಕೋಸ್ಕರ ಬ್ರಾಹ್ಮಣ ಜಾತಿಯು ಸಾಂಸಾರಿಕ ಸರ್ವ ಸುಖಗಳನ್ನೂ ತೊರೆದು ಕಾಡುಗಳಲ್ಲಿಯೂ, ಬೆಟ್ಟಗಳಲ್ಲಿಯೂ ಇದ್ದುಕೊಂಡು ಪ್ರಪಂಚದ ಶ್ರೇಯಸ್ಸಿಗೋಸ್ಕರ ಧರ್ಮ ತತ್ತ್ವಗಳನ್ನು ಹುಡುಕಿ ಹುಡುಕಿ ಅನೇಕ ಗ್ರಂಥಗಳನ್ನು ಮಾಡಿರುವುದು. ಈ ಪರಿಶ್ರಮಕ್ಕ

ಪ್ರಪಂಚವು ಆ ಬ್ರಾಹ್ಮಣರಿಗೆ ಏನು ಕೊಡಬಲ್ಲದು ? ದಾನಸ್ವರೂಪದಲ್ಲಿ ಅಲ್ಪ ಸ್ವಲ್ಪ ಆ ಜಾತಿಗೆ ದೊರಕುತ್ತಿದ್ದುದು ಆ ಜಾತಿಯ ಪರಿಶ್ರಮಕ್ಕೆ ಪುರಸ್ಕಾರವಾಗುತ್ತಲಿದ್ದಿತು. ಆದರೆ ಆ ಕಾಲದ ಬ್ರಾಹ್ಮಣರು ಆ ರೀತಿಯಲ್ಲಿದ್ದರು. ಈಗಿನ ಬ್ರಾಹ್ಮಣರು ಅದಕ್ಕೆ ಅರ್ಹತೆಯನ್ನು ಹೊಂದುವ ಸ್ಥಿತಿಯಲ್ಲಿಲ್ಲವೆಂದು ಹೇಳುವುದಾದರೆ ಈಗಿನ ಕಾಲದಲ್ಲಿಯೂ ಅಲ್ಪಸ್ವಲ್ಪ ಅದೇರೀತಿಯ ಬ್ರಾಹ್ಮಣರು ಉಳಿದಿರುವರು. ಸಮಯದ ಪರಿಸ್ಥಿತಿಯನ್ನು ನೋಡಿದರೆ ಅದೇ ಬಹಳ ಹೆಚ್ಚೆಂದು ತಿಳಿಯಬೇಕು. ಬ್ರಾಹ್ಮಣರ ಮಾತೇನು. ಸಕಲವರ್ಣವೂ ಈಗಿನ ಸ್ಥಿತಿಯಲ್ಲಿ ಕೆಟ್ಟುಹೋಗಿರುವುದು. ವರ್ಣಾಶ್ರಮಧರ್ಮದಲ್ಲಿ ಪೂರ್ವದಂತೆ ದೃಢವಾಗಿರುವ ಯಾವ ವರ್ಣವೂ ದೃಷ್ಟಿಗೆ ಗೋಚರವಾಗುವುದಿಲ್ಲ. ಬ್ರಾಹ್ಮಣರಲ್ಲನೇಕರು ತಮ್ಮ ಕರ್ತವ್ಯದಲ್ಲಿ ವಿಮುಖರಾಗಿರುವಂತೆ ಇತರ ವರ್ಣದವರೂ ತಮ್ಮ ತಮ್ಮ ವರ್ಣಧರ್ಮದಲ್ಲಿ ವಿಮುಖರಾಗಿಯೇ ಇರುವರು. ಯಾವ ದೇಶವಾದರೂ ಯಾವ ಜಾತಿಯಾದರೂ ಉನ್ನತಿಯನ್ನಾಗಲೀ, ಅವನತಿಯನ್ನಾಗಲೀ ಹೊಂದುವ ವಿಷಯವೇ ಬೇರೆ. ವರ್ಣಾಶ್ರಮಧರ್ಮದ ವಿಷಯವೇ ಬೇರೆ. ಇದೆಲ್ಲವೂ ಪರಮಾತ್ಮನ ವಿಲಾಸವು. ಒಂದಾನೊಂದು ಕಾಲದಲ್ಲಿ ಈರಾನ್, ರೋಮ್, ಯೂನಾನ್, ಮಿಸರ್ ಮೊದಲಾದ ದೇಶಗಳು ಎಷ್ಟು ಉನ್ನತಾವಸ್ಥೆಯಲ್ಲಿದ್ದುವು ಎಂಬ ಅಂಶವು ಪ್ರಾಚೀನವಾದ ಇತಿಹಾಸವನ್ನು ಓದಿದವರಿಗೆ ತಿಳಿಯದ ಹೊಸ ವಿಷಯವಲ್ಲ. ಆ ದೇಶಗಳಲ್ಲಿ ವರ್ಣವ್ಯವಸ್ಥೆಯು ಇಲ್ಲವಷ್ಟೆ. ಅವುಗಳು ಹೇಗೆ ಅವನತಿಯನ್ನು ಹೊಂದಿದುವು. ಇದನ್ನು ವಿಚಾರಮಾಡಿದರೆ ವರ್ಣವ್ಯವಸ್ಥೆಗೂ ದೇಶದ ಅವನತಿಗೂ ಸಂಬಂಧವಿಲ್ಲವೆಂಬ ಅಂಶವು ಕಂಡುಬರುವುದು. ಆ ದೇಶಗಳ ಅವನತಿಗೆ ವರ್ಣಧರ್ಮವಲ್ಲದೆ ಬೇರೆ ಕಾರಣವಿರುವಂತೆಯೇ ನಮ್ಮ ದೇಶದ ಮತ್ತು ನಮ್ಮ ಜಾತಿಯ ಅವನತಿಗೂ ಕೂಡ ಅನೇಕ ಕಾರಣಗಳಿವೆ. ನಮ್ಮಲ್ಲಿ ಪ್ರಾಚೀನವಾದ ವರ್ಣವ್ಯವಸ್ಥೆಯು ಇಲ್ಲದೆ ಇದ್ದಿದ್ದರೆ ಗಂಗಾನದಿಯ ಮಧುರವಾದ ನೀರು ಸಮುದ್ರದ ನೀರಿನೊಡನೆ ಬೆರತು ಲೋಪವಾಗಿ ಹೋಗುವಂತೆ ನಮ್ಮ ಜಾತಿಯೂ ಕೂಡ ಇತರ ಜಾತಿಗಳೊಡನೆ ಕಲೆತು ಹೆಸರೇ ಇಲ್ಲದಂತಾಗುತ್ತಿತ್ತು. ವಾಸ್ತವದಲ್ಲಿ ಉನ್ನತಶೀಲರಾದ ಪಾಶ್ಚಾತ್ಯರ ಥಳಕು ಬೆಳಕುಗಳ ಮಾಯಾಜಾಲದಲ್ಲಿ ಸಿಲುಕಿ ನಮ್ಮ ಮನಸ್ಸುಗಳಲ್ಲಿ ವಿಧವಿಧಗಳಾದ ಕೆಟ್ಟ ಭಾವನೆಗಳು ಉಂಟಾಗಿವೆ. ಪಾಶ್ಚಾತ್ಯರ ಸಭ್ಯತೆಯೂ ಅವರ ಉನ್ನತಿಯೂ ಅವರಿಗೆ ಶ್ರೇಯಸ್ಕರವೇ ವಿನಾ ನಮಗಲ್ಲ.

ನಮಗೆ ಒಳ್ಳೆಯದಾಗಬೇಕಾದರೆ ನಮ್ಮ ಪ್ರಾಚೀನ ಪದ್ಧತಿಗಳನ್ನೂ ನಮ್ಮ ಸನಾತನ ಧರ್ಮಗಳನ್ನೂ ಅಭಿವೃದ್ಧಿಗೊಳಿಸಬೇಕು. ಯತ್ನವಿಲ್ಲದೆ ಕೆಲವು ಕಾರಣಗಳಿಂದ ನಮ್ಮ ಪದ್ಧತಿಯಲ್ಲಿಯೂ ನಮ್ಮ ಧರ್ಮದಲ್ಲಿಯೂ ಕೆಲವು ವ್ಯತ್ಯಾಸಗಳು ತಲೆದೋರಿವೆ ಆ ವ್ಯತ್ಯಾಸಗಳನ್ನು ದೂರಪಡಿಸುವುದು ಅತ್ಯಾವಶ್ಯಕವು. ನಮ್ಮ ಪ್ರಾಚೀನರ ಸಭ್ಯತೆಯು ಪ್ರಪಂಚದಲ್ಲಿ ಸರ್ವೋತ್ತಮವಾಗಿತ್ತು. ಅದರ ಮೂಲಕವಾಗಿಯೇ ನಮ್ಮ ಏಳಿಗೆಯು ಖಂಡಿತವಾಗಿ ಆಗುವುದು. ಈಗ ನಮ್ಮಲ್ಲಿ ಕಂಡುಬರುವ ವಿಕಾರಗಳು ಪ್ರಾಚೀನವಾದುವುಗಳಲ್ಲ. ಆದ್ದರಿಂದ ಅವುಗಳನ್ನು ತೊರೆದು ನಮ್ಮ ಜಾತಿಯವರ ಪೂರ್ವ ಪದ್ಧತಿಯನ್ನು ಸ್ಥಿರಪಡಿಸಿ ಪರಸ್ಪರ ಪ್ರೀತಿಯನ್ನು ವೃದ್ಧಿಗೊಳಿಸುವುದು ಸರ್ವ ವಿಧದಲ್ಲಿಯೂ ಲಾಭಕರವಾಗಿರುವುದು. ನಮ್ಮ ಮಹರ್ಷಿಗಳು ಈ ಪರಸ್ಪರ ಪ್ರೇಮವನ್ನು ಸರ್ವರಲ್ಲಿಯೂ ಬೆರೆಸುವುದಕ್ಕಾಗಿಯೇ ಪ್ರತಿಯೊಂದು ಜಾತಿಯವರೂ ಪರಸ್ಪರ ಸಹಾಯಕರಾಗುವಂತೆ ಅವರವರಿಗೆ ಬೇರೆ ಬೇರೆ ಕರ್ತವ್ಯಗಳನ್ನೇರ್ಪಡಿಸಿ ವರ್ಣವ್ಯವಸ್ಥೆಯನ್ನು ಸುಂದರತರ ರೀತಿಯಿಂದ ವಿಭಾಗಿಸಿಟ್ಟರು. ಮುಖ್ಯವಾಗಿ ನಮ್ಮ ಶರೀರದಲ್ಲಿ ಪ್ರತಿಯೊಂದು ಅವಯವದ ಕೆಲಸಗಳು ಬೇರೆಬೇರೆಯಾಗಿದ್ದಾಗ್ಯೂ ಒಂದಕ್ಕೊಂದು ಸಹಾಯಗಳಾಗಿವೆ. ತಲೆಗೆ ಶಸ್ತ್ರಪ್ರಹಾರವು ಬೀಳುವಂತಿದ್ದರೆ ಹಸ್ತವು ತನ್ನಷ್ಟಕ್ಕೆ ತಾನೇ ಅಡ್ಡವಾಗಿ ಮೇಲಕ್ಕೆದ್ದು ನಿಲ್ಲುವುದು. ಇದೇ ಪ್ರಕಾರವಾಗಿ ಕೈಗೆ ಪೆಟ್ಟು ಬಿದ್ದರೆ ಬಾಯಿಯಿಂದ ಹಾ ಎಂಬ ಧ್ವನಿಯುಂಟಾಗುವುದು. ಕೈಗೆ ಪೆಟ್ಟು ಬಿದ್ದು ಬಾಯಿಯು ನಗುತ್ತಿರುವುದನ್ನು ನಾವು ಎಂದೂ ಕಾಣಲಿಲ್ಲ ಇದೇ ರೀತಿಯಲ್ಲಿ ವರ್ಣಾಶ್ರಮ ಪದ್ಧತಿಯು ಒಂದಕ್ಕೊಂದು ಆಶ್ರಯಿಸಿಕೊಂಡು ದೃಢಸಂಬಂಧವನ್ನುಂಟುಮಾಡುವುದಕ್ಕೇನೇ ಪ್ರಚಲಿತವಾಗಿರುವುದು.

ಹೀಗೆ ವರ್ಣಕ್ರಮವು ಅನಾದಿಕಾಲದಿಂದಲೂ ಈಶ್ವರಸೃಷ್ಟವಾಗಿ ಶ್ರುತಿ ಸ್ಮೃತಿ ಪ್ರಮಾಣಗಳಿಂದಲೂ ಲೋಕವ್ಯವಹಾರದಿಂದಲೂ ಸರ್ವೋಪಕಾರಕವಾಗಿ ಸರ್ವಜನ ಶ್ರೇಯಸ್ಸಿಗೆ ಅನುಕೂಲವಾಗಿ ಜನ್ಮ ಗುಣಕರ್ಮಗಳನ್ನನುಸರಿಸಿ ನಡೆದುಬರುತ್ತಿದ್ದಾಗ್ಯೂ ಕೆಲವು ಜನಗಳು ಆಚಾರ ವ್ಯವಸ್ಥಾಪಕರೆಂದು ತಮ್ಮಲ್ಲಿ ತಾವು ತಿಳಿದುಕೊಂಡು ಲೋಕದ ನಡೆತೆಗೂ ಶಾಸ್ತ್ರಕ್ಕೂ ಶ್ರೇಯಸ್ಸಿಗೂ ವಿರುದ್ಧವಾಗಿ ಜಾತಿಭೇದಗಳು ಪೂರ್ವದಲ್ಲಿರಲಿಲ್ಲವೆಂತಲೂ ದೇಶಾಂತರದಿಂದಈ ದೇಶಕ್ಕೆ ಆರ್ಯರು ಬಂದಾಗ ಕಲ್ಪಿಸಲ್ಪಟ್ಟಿವೆಂತಲೂ ಹೇಳುತ್ತಾ.

ಅದಕ್ಕೆ ಸಾದಕವೆಂದು ಋಗ್ವೇದದ ಕೆಲವು ಮಂತ್ರಗಳನ್ನೂ ವಜ್ರಸೂಚೀ ಉಪನಿಷತ್ತನ್ನೂ ಅದರ ಅರ್ಥವನ್ನೂ ಪ್ರಕರಣವನ್ನೂ ಅಭಿಪ್ರಾಯವನ್ನೂ ಅರಿತುಕೊಳ್ಳದೆ ಉದಹರಿಸುವರು. ಆಧುನಿಕರಿಂದ ಬರಯಲ್ಪಟ್ಟಿರುವ ಹಿಂದೂದೇಶದ ಚರಿತ್ರೆಗಳನ್ನು ಉದಹರಿಸಿ ತಮ್ಮ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಿರುವರು. ಇದು ವಿಚಾರಿಸತಕ್ಕ ಅಂಶವಾಗಿರುವುದು.

ಹಿಂದೂ ಚರಿತ್ರೆಗಳನ್ನು ಬರೆದವರು ಪ್ರಾಯಶಃ ಯೂರೋಪಿಯನ್ ಜನಗಳು. ಆ ವಾಸನೆಯುಳ್ಳ ಕೆಲವು ಹಿಂದೂಜನರೂ ಬರೆದಿರುವರು. ಇವರು ವೇದಕಾಲದಲ್ಲಿ ಜಾತಿಭೇದವು ಇರಲಿಲ್ಲವೆಂತಲೂ ಆದ್ದರಿಂದಲೇ ಆ ಕಾಲದಲ್ಲಿ ಜಾತಿಭೇದದ ವಿಚಾರವಿಲ್ಲದೆ ವಿವಾಹಾದಿ ಕರ್ಮಗಳು ನೆರವೇರಿಸಲ್ಪಡುತ್ತಿದ್ದುವೆಂತಲೂ ಧೈರ್ಯವಾಗಿ ಬರೆದಿರುವರು. ಹಿಂದೂದೇಶದ ಚರಿತ್ರ ಲೇಖನವೇ ಜೀವನವಾಗಿ ಉಳ್ಳ ಇ ಮಾರ್ಸ್‌ಡನ್ ಸಾಹೇಬರು ಬರೆದಿರುವ ಚರಿತ್ರ ಪುಸ್ತಕದಲ್ಲಿ ನಾವು ಈ ವಿಷಯವನ್ನು ಅವಶ್ಯವಾಗಿಯೂ ಗಮನಿಸಬೇಕು. ಅದೇನಂದರೆ, ವೇದಕಾಲದಲ್ಲಿ ಜಾತಿಭೇದವಿರಲಿಲ್ಲ. ಆಗ ಕರ್ಮಾನುಸಾರುವಾಗಿಯೇ ಜಾತಿವ್ಯವಸ್ಥೆಯು ಅಂಗೀಕರಿಸಲ್ಪಡುತ್ತಿತ್ತು. ಒಂದೇ ಕುಟುಂಬದಲ್ಲಿ ಒಬ್ಬ ಬ್ರಾಹ್ಮಣನಾದರೆ ಮತ್ತೊಬ್ಬನು ಕ್ಷತ್ರಿಯನಾಗಿ ಅವರವರ ಪ್ರವೃತ್ತಿಯನ್ನನುಸರಿಸಿ ವ್ಯವಹರಿಸಲ್ಪಡುತ್ತಿದ್ದರು. ಈ ವಿಷಯದಲ್ಲಿ ಒಂದು ಋಙ್ಮಂತ್ರವು ಪ್ರಮಾಣವಾಗಿರುವುದು. ಅದು ಯಾವದೆಂದರೆ.—

ಕಾರುರಹಂತತೊ ಭಿಷಕ್ ಉಪಲಪ್ರಕ್ಷಿಣೀನನಾ ।
ನಾನಾಧಿಯೊವಸುಯವೋನುಗಾ ಇವತಸ್ಥಿಮೇನ್ದ್ರಾಯೇನ್ದೊ ಪರಿಸ್ರವ ॥

ಒಬ್ಬ ಋಷಿಯು ನಾನು ಶಿಲ್ಪಿಯು, ನನ್ನ ತಂದೆಯು ಚಿಕಿತ್ಸಕನು, ತಾಯಿಯು ಬೀಸುವಳು, ಧನಾಭಿಲಾಷೆಯುಳ್ಳ ನಾವು ಹೀಗೆ ವಿವಿಧ ಕರ್ಮಗಳುಳ್ಳವರಾಗಿದ್ದೇವೆ ಎಂದು ಇದರ ಅರ್ಥವು. ಈ ಮಂತ್ರಾರ್ಥವನ್ನು ಪರ್ಯಾಲೋಚಿಸಿದರೆ ಜಾತಿ ವ್ಯವಸ್ಥೆಯು ನಾವು ಹಿಂದೆ ಹೇಳಿದಂತೆಯೇ ಎಂದು ಸ್ಫುಟವಾಗುವುದು ಎಂದು ಆ ಚರಿತ್ರೆಯಲ್ಲಿ ಬರೆದಿರುವದು. ಹೀಗೆಯೇ ಮ್ಯಾಕ್ಸ್ ಮುಲರ್ ಸರ್ ಆಲ್ಫ್ರೆಡ್ಲಯನ್ ಆರ್. ಸಿ. ದತ್ತರು ಇವರೇ ಮೊದಲಾದವರು ಬಹುವಿಧ ತರ್ಕ ವಿತರ್ಕಗಳಿಂದ ಜಾತಿಭೇದವು ಈಚಿಗೆ ಕಲ್ಪಿಸಲ್ಪಟ್ಟದ್ದೆಂದು ವಿಮರ್ಶೆ ಮಾಡುತ್ತಾರೆ. ಇವರ ವಿಮರ್ಶನ ಪಾಂಡಿತ್ಯವನ್ನು ಕುರಿತು ನಾವು ಹೇಳಬೇಕಾದ್ದೇನೂ ಇಲ್ಲವು. ಪ್ರಮಾಣಶರಣರಾದ ಆಸ್ತಿಕರು ಇದನ್ನು ಅಂಗೀ

ಕರಿಸಲು ಸಾಧ್ಯವಿಲ್ಲವೆಂಬಂಶವು ವಿದಿತವೇ. ಈ ವಿಧವಾದ ಚರಿತ್ರೆಗಳನ್ನು ನಮ್ಮ ಬಾಲಕರು ವಿಧಿಯಿಲ್ಲದೆ ಓದಬೇಕಾಗಿದೆ. ಆದರೂ ಅಲ್ಲಿ ಇರುವ ಸರ್ವ ವಿಷಯಗಳೂ ನಂಬಲರ್ಹಗಳಲ್ಲವು. ಅದರಲ್ಲಿಯೂ ಜಾತಿಯ ವಿಷಯದಲ್ಲಿ ಈ ಚರಿತ್ರೆಗಳನ್ನು ನಂಬಿ ಮೋಸಹೋಗಬಾರದು. ಈಗಿರುವ ಚರಿತ್ರೆಗಳು ಪ್ರಾಯಃ ಅಂತಹ ವಿಜಾತೀಯರಿಂದಲೇ ಬರೆಯಲ್ಪಟ್ಟವುಗಳು. ಅವರು ನಮ್ಮ ಮತ ರಹಸ್ಯವನ್ನು ಸರ್ವಥಾ ಅರಿಯುವ ಶಕ್ತಿಯುಳ್ಳವರಲ್ಲ. ನಮ್ಮ ಸಹವಾಸವನ್ನು ಅವರು ಸರಿಯಾಗಿ ಮಾಡಿದವರಲ್ಲ ಆದುದರಿಂದಲೇ ವಿದ್ವಾಂಸರನೇಕರು ಇವುಗಳು ನಮ್ಮ ನಾಗರಿಕತೆಯ ಉತ್ಕರ್ಷವನ್ನು ಪ್ರಕಾಶಪಡಿಸಲಾರವೆಂದು ನಿರ್ಧರಿಸಿರುವರು. ಅದನ್ನು ಮರೆಯಕೂಡದು.

ಒಂದಾವರ್ತಿ ಸ್ವಾಮಿ ವಿವೇಕಾನಂದರು ಅಮೇರಿಕಾ ದೇಶಕ್ಕೆ ಹೋಗಿದ್ದಾಗ ಅಲ್ಲಿಯ ಶಾಲೆಗಳಲ್ಲಿ ಹಿಂದೂ ಚರಿತ್ರೆಯನ್ನು ಬೋಧಿಸುತ್ತಿರುವದನ್ನು ನೋಡಿ ಬಹು ದುಃಖವನ್ನೂ ಕೋಪವನ್ನೂ ಹೊಂದಿದರು. ವಿಷಯವೇನೆಂದರೆ ಹಿಂದೂ ದೇಶದಲ್ಲಿ ಹೆಂಗಸರು ಹೆತ್ತ ಮಕ್ಕಳನ್ನು ಜೀವದೊಂದಿಗೆ ನದಿಯಲ್ಲಿ ಹಾಕುವರು. ಗಂಡಸರು ತಮ್ಮ ಹೆಂಡತಿಯರನ್ನು ಕತ್ತಿಯಿಂದ ಕತ್ತರಿಸಿ ಕೊಂದುಹಾಕುವರು ಎಂದು ಬೋಧಿಸುತ್ತಾ ಅದರಂತೆ ಚಿತ್ರಪಟಗಳನ್ನು ತೋರಿಸಿ ಜನಗಳ ಮನಸ್ಸಿನಲ್ಲಿ ನಾಟುವಂತೆ ಮಾಡುತ್ತಿದ್ದರು. ಇಂತಹ ಕಲ್ಪಿತ ಚರಿತ್ರೆಗಳು ಇನ್ನೂ ನಮ್ಮ ಶಾಲೆಗಳಲ್ಲಿ ಪಾಠ ಪುಸ್ತಕಗಳಾಗಿ ಇವೆ. ಇದರ ಮೂಲಕ ಉಂಟಾಗಬಹುದಾದ ಅನರ್ಥವನ್ನು ನಾವು ವಿವರಿಸಬೇಕಾಗಿಲ್ಲ. ನಿಜವಾಗಿಯೂ ವಿಚಾರಮಾಡಿದರೆ ಶಿಶುಹತ್ಯೆಯೇ ಮೊದಲಾದ ಕ್ರೂರ ಕರ್ಮಗಳು ನಮ್ಮ ದೇಶದಲ್ಲಿ ಯಾವಾಗಲಾದರೂ ನಡೆದಿರುವುದೆಂದು ಪುರಾಣಾದಿಗಳಿಂದ ಕಂಡುಬರುವುದೇ? ಅಸಮಂಜಸನೆಂಬ ಸಗರ ಚಕ್ರವರ್ತಿಯ ಮಗನು ಈ ವಿಧವಾದ ಕೆಲಸವನ್ನು ಮಾಡಿದನೆಂದು ರಾಮಾಯಣದಿಂದ ತಿಳಿದುಬರುತ್ತದೆ. ಆದರೆ ಅದನ್ನೆ ಆಧಾರವಾಗಿಟ್ಟುಕೊಂಡು ಚರಿತ್ರಕಾರರು ಹೀಗೆ ಬರಿಯುವುದಾದರೆ ಅದು ಶುದ್ಧ ಅನುಚಿತವು. ಅವನು ಅಪರಾಧಿ ಎಂದು ದೇಶದಿಂದ ಅವನನ್ನು ಹೊರಡಿಸಲಿಲ್ಲವೇ? ಒಂದು ದೇಶದಲ್ಲಿ ಒಬ್ಬರಿಬ್ಬರು ಇಂತಹ ನೀಚ ಕಾರ್ಯವನ್ನು ಮಾಡಿದರೆ ದೇಶವೇ ಈ ಕೆಲಸವನ್ನು ಮಾಡುತ್ತಿರುವುದೆಂದು ಬರಿಯುವಧಾರ್ಷ್ಟ್ಯವು ನ್ಯಾಯ್ಯವಲ್ಲ. ಒಬ್ಬರಿಬ್ಬರು ಮಾಡಿದ ಕೆಲಸಕ್ಕೆ ದೇಶವು ಹೊಣೆಯಾಗುವುದೇ? ಒಂದನೇ ಚಾರ್ಲಸ್ ಎಂಬ ಧೊರೆ

ಯು ಪ್ರಜೆಗಳಿಂದ ಕೊಲ್ಲಲ್ಪಟ್ಟನೆಂದರೆ ಆ ದೇಶದ ಜನಗಳಿಗೆ ರಾಜ ವಿಶ್ವಾಸವಿಲ್ಲನೆಂದು ವಿವೇಕಿಯಾದವನು ಹೇಳುವನೇ ? ಯಾರೂ ಹಾಗೆ ಹೇಳಲಾರರು. ಆದ್ದರಿಂದ ಮಾರ್ಸಡೆಕ್ ಸಾಹೇಬರೆ ಮೊದಲಾದವರು ಮತರಹಸ್ಯವನ್ನರಿಯುವ ಸಾಮರ್ಥ್ಯವಿಲ್ಲದೆ ಅನಾದಿ ಕಾಲದಿಂದಲೂ ಪ್ರವೃತ್ತವಾದ ಜಾತಿಭೇದದ ವಿಷಯದಲ್ಲಿ ನಮ್ಮ ಪ್ರಮಾಣಗಳಿಗೆ ವಿಪರೀತವಾಗಿ ಬರಯುವುದನ್ನು ನಾವು ನಂಬಬಾರದು.

ಮಧ್ಯ ಏಷ್ಯಾದಿಂದ ಆರ್ಯರು ಇಲ್ಲಿಗೆ ಬಂದಮೇಲೆ ಜಾತಿಭೇದವು ಉಂಟಾಯಿತೆಂದು ಹೇಳುವರು. ಮಧ್ಯ ಏಷ್ಯಾದಿಂದ ಇಲ್ಲಿಗೆ ಬಂದು ವಾಸ ಮಾಡಿದರು ಎಂಬ ಕಥೆಯೇ ನಂಬತಕ್ಕದ್ದಲ್ಲವೆಂದು ಹಿಂದುಗಳಲ್ಲಿಯೂ ಯೂರೋಪಿಯನರಲ್ಲಿಯೂ ಪಂಡಿತರೆಂದು ಪ್ರಖ್ಯಾತರಾದ ಶ್ರೀಮಾನ್ ಬಾಲ ಗಂಗಾಧರ ತಿಲಕರವರು ಅನೇಕ ಪ್ರಮಾಣಗಳಿಂದ ಸ್ಥಿರಪಡಿಸಿರುವರು. ಇದಕ್ಕೆ ಚರಿತ್ರಕಾರರ ಉತ್ತರವೇನು ? ಈ ವಿಷಯದಲ್ಲಿ ನವೀನ ಚರಿತ್ರಕಾರರಲ್ಲಿಯೇ ಅಭಿಪ್ರಾಯ ಭೇದಗಳು ಹುಟ್ಟಿರುವದನ್ನು ಮರೆಯಲಾಗದು. ಆರ್ಯರು ಮಧ್ಯ ಏಷ್ಯಾದಿಂದ ಇಲ್ಲಿಗೆ ಬಂದಂತೆ ಕೆಲವರು ಪಶ್ಚಿಮಕ್ಕೆ ಹೋಗಿ ಇಟಲಿ ಪ್ರಾನ್ಸ್ ಜರ್ಮನಿ ಬ್ರಿಟನ್ ಮೊದಲಾದ ದೇಶಗಳಲ್ಲಿ ವಾಸಮಾಡಿ ತಮ್ಮ ನಾಗರಿಕತೆಯನ್ನು ವಿಸ್ತರಿಸಿದರೆಂದು ಅದೇ ಚರಿತ್ರೆಯಲ್ಲಿ ಹೇಳುವದನ್ನು ಪಾಶ್ಚಾತ್ಯರು ಒಪ್ಪುವರೇ ? ಮನುಷ್ಯತತ್ವ ವಿಮರ್ಶಕರಾದ ಅನೇಕ ಯೂರೋಪಿಯನ್ನರು ಈ ವಿಷಯವನ್ನು ಪರ್ಯಾಲೋಚಿಸಿ ಇದಕ್ಕೆ ಆಧಾರವೇನೂ ಇಲ್ಲವೆಂದು ನಿರಾಕರಿಸಿರುವರು. ಇವುಗಳನ್ನೆಲ್ಲವನ್ನು ಪರ್ಯಾಲೋಚಿಸಿ ನವ್ಯಚರಿತ್ರಕಾರರುಗಳು ಏತದ್ದೇಶೀಯರೇ (ಪೂರ್ವದಿಂದಲೂ ಇಲ್ಲಿಯೇ ವಾಸಮಾಡಿಕೊಂಡಿದ್ದವರೆ) ಆರ್ಯರೆಂದು ನಿಶ್ಚಯಿಸಿರುವರು. ಮತ್ತು ಇವರು ವೇದಕಾಲದಲ್ಲಿ ಜಾತಿಭೇದವಿರಲಿಲ್ಲವೆಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಕೇವಲ ಬುದ್ಧಿ ಚಾತುರ್ಯದಿಂದ ನಮ್ಮ ಪ್ರಮಾಣಗಳಿಗೆ ವಿರುದ್ಧವಾಗಿ ಹೇಳುವುದಾದರೆ ಅದನ್ನು ಅಂಗೀಕರಿಸುವದೂ ಯುಕ್ತವಲ್ಲ. ವೇದಕಾಲವೆಂಬ ಒಂದು ಕಾಲವನ್ನು ಸಹಾ ಕಲ್ಪಿಸುವುದು ಹೇಗೆ ? ವೇದಗಳು ಅನಾದಿಗಳು. ಅವುಗಳಿಗೆ ಕಾಲವೆಂದರೇನು. ಎಲ್ಲವೂ ವೇದಕಾಲವೇ ? ಏಕೆಂದರೆ "ನಾಮರೂಪಂಚ ಭೂತಾನಾಂ ಕೃತ್ಯಾನಾಂಚಪ್ರಪಂಚನಂ| ವೇದಶಬ್ದೇಭ್ಯಏವಾದೌ ದೇವಾದೀನಾಂಚಕಾರಸಃ | ಋಷೀಣಾಂ ನಾಮಧೇಯಾನಿ ಯಾಧಾವೇದಶ್ರುತಾನಿನ್ವೈ ||" ಅಂದರೆ ಲೋಕ

ಸೃಷ್ಟಿಯನ್ನು ಮಾಡುವ ಬ್ರಹ್ಮನು ಪ್ರಾಣಿಗಳನ್ನು ಹೇಗೆ ಸೃಷ್ಟಿಸಬೇಕು ಅವರಿಗೆ ನಾಮಗಳನ್ನು ಹೇಗೆ ಕಲ್ಪಿಸಬೇಕು ಎಂಬಂಶಗಳನ್ನೆಲ್ಲವನ್ನೂ ವೇದಗಳಿಂದಲೇ ಅರಿತು ಅಲ್ಲಿ ಹೇಳಿರುವ ಪ್ರಕಾರವಾಗಿಯೇ ಲೋಕಸೃಷ್ಟಿಯನ್ನು ಮಾಡಿದನು ಎಂದು ಪರಾಶರರು ಸ್ಪಷ್ಟವಾಗಿ ಹೇಳಿರುವರು. ಹೀಗೆ ಜಗತ್ಸೃಷ್ಟಿಗೇನೆ ವೇದವು ಮೂಲವಾಗಿರುವಾಗ ವೇದಕಾಲವೆಂದು ಒಂದು ಕಾಲವನ್ನು ನಿರ್ಣಯಮಾಡುವದೇ ಅಸಂಗತವಾದದ್ದು. ಇನ್ನು ಜಾತಿಭೇದವಿರಲಿಲ್ಲವೆಂಬುದಕ್ಕೆ ಇವರು ಉದಹರಿಸಿರುವ ಋುಙ್ಮಂತ್ರವನ್ನು ವಿಚಾರಮಾಡಿದರ ಇವರ ಅಭಿಪ್ರಾಯವು ಶುದ್ಧ ಅಸಂಗತವೆಂದು ತಿಳಿಯಬರುವದು. ಆ ಮಂತ್ರವು ಒಂದು ಯಾಗದಲ್ಲಿ ಸೋಮರಸವನ್ನು ಹಿಂಡುವ ಕಾಲದಲ್ಲಿ ಯಜಮಾನನಿಂದ ಉಪಯೋಗಿಸಲ್ಪಟ್ಟಿರುವ ಮಂತ್ರವಾಗಿರುವುದು.

ಸೋಮಲತೆಯನ್ನು ಸ್ತೋತ್ರಮಾಡುವ ಯಜಮಾನನು ಎಲೈ ಸೊಮ ನಾನು ಮಾಡುವ ಈ ಯಾಗದಲ್ಲಿ ಇಂದ್ರದೇವತೆಗೆ ನೀನು ರಸರೂಪವಾಗಿ ಸ್ರವಿಸು ಎಂದು ಪ್ರಾರ್ಥಿಸಿ ತನ್ನಲ್ಲಿ ಸೋಮಲತೆಯ ಕೃಪಾ ಸಂಪಾದನಕ್ಕೋಸ್ಕರ ಸರ್ವ ಪ್ರಕಾರದಲ್ಲಿಯೂ ಯಜ್ಞತಪ್ಪರರಾಗಿ ತಮ್ಮ ಕುಟುಂಬದವರೆಲ್ಲವು ಮಾಡುವ ಕೆಲಸವನ್ನು ತೋರಿಸುತ್ತಾನೆ. ನಾನು ಯಜ್ಞಕ್ಕೆ ಬೇಕಾದ ಸ್ತೋತ್ರ ಶಸ್ತ್ರಾದಿ ಮಂತ್ರಗಳನ್ನು ಗಾನಮಾಡುತ್ತಾ ಕವಿಯಾಗಿರುತ್ತೇನೆ. ನನ್ನ ತಂದೆಯು ಯಜ್ಞದಲ್ಲಿ ಮಂತ್ರ ತಂತ್ರಗಳಿಗೆ ಲೋಪ ಒರದಂತೆ ನೋಡಿಕೊಳ್ಳುತ್ತಾ ವೈದ್ಯನಿಗೆ ಸಮಾನನಾಗಿ ಒಬ್ಬ ಋುತ್ವಿಕ್ಕಾಗಿರುವನು. ನನ್ನ ತಾಯಿಯು ಯಜ್ಞೋಪಯುಕ್ತಗಳಾದ ಚರುಪುರೋಡಾದಿಗಳಿಗಾಗಿ ಹಿಟ್ಟನ್ನು ಬೀಸುವಳು. ಆದ್ದರಿಂದ ಕುಟುಂಬದ ಪ್ರತಿಯೊಬ್ಬರೂ ಯಜ್ಞದ ಶಿಶ್ರೂಷೆಯನ್ನು ಬೇರೆಬೇರೆಯಾಗಿ ಮಾಡುತ್ತಾ ಹಸುವಿನಂತೆ ನಿನ್ನನ್ನೆ ಆಶ್ರಯಿಸಿಕೊಂಡು ಇರುತ್ತೇವೆ. ನೀನು ನನ್ನ ಇಷ್ಟವನ್ನು ನೆರವೇರಿಸಬೇಕೆಂದು ಪ್ರಾರ್ಥಿಸುತ್ತಾನೆ. ಈ ವಿಷಯವನ್ನು ವಿಚಾರಮಾಡಿದರೆ ಚರಿತ್ರಕಾರರು ಬರೆದಿದಿರುವ ಅಭಿಪ್ರಾಯವು ಎಷ್ಟು ಸಂಗತವಾಗಿರುವುದೆಂಬುವುದು ನಿಸ್ವರಿಗೂ ವಿದಿತವಾಗುವುದು. ಎಲೈ ಸೋಮದೇವನೇ ಇಂದ್ರನಿಗೋಸ್ಕರ ನೀನು ರಸರೂಪವಾಗಿ ಸ್ರವಿಸು ಎಂದು ಮಂತ್ರಚರಮಭಾಗದ ಅರ್ಥಕ್ಕೆ ಹಿಂದೆ ಹೇಳಿದ ಚರಿತ್ರಕಾರರ ಅರ್ಥವು ಸುತರಾಂ ಅಸಂಗತವಾಗುವುದರಿಂದ ಈ ಮಂತ್ರವನ್ನು ಆಶ್ರಯಿಸಿಕೊಂಡು ವೇದಕಾಲದಲ್ಲಿ ಜಾತಿಭೇದವಿರಲಿಲ್ಲವೆಂತಲೂ ಗುಣಕರ್ಮಾನುಸಾರವಾಗಿಯೇ ಜಾತಿಭೇದಗಳು ಉಂಟಾದುವೆಂತಲೂ ಸಹ ಹೇಳುವುದು ಕೇವಲ ವಿಚಾರವಿಲ್ಲದ ಮಾತಾಗಿರುವುದು.

ಇನ್ನು ವಜ್ರಸೂಚಿ ಉಪನಿಷತ್ತನ್ನು ವಿಚಾರಮಾಡೋಣ. ಅಲ್ಲಿ ಹೇಳಿರುವುದೇನಂದರೆ.—

ವಜ್ರಸೂಚೀಂಪ್ರವಕ್ಷ್ಯಾಮಿ ಶಸ್ತ್ರಮಜ್ಞಾನಭೇದನಂ |
ದೂಷಣಂ ಜ್ಞಾನಹೀನಾನಾಂಭೂಷಣಂಜ್ಞಾನಚಕ್ಷುಷಾಂ ||

ಎಂದು ಉಪಕ್ರಮಿಸಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳವರಲ್ಲಿ ಬ್ರಾಹ್ಮಣರೇ ಪ್ರಧಾನರೆಂದು ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು. ಇದು ವಿಚಾರಿಸತಕ್ಕದ್ದು. ಬ್ರಾಹ್ಮಣರೆಂದರೆ ಯಾರು? ಜೀವನೇ? ದೇಹವೇ? ಜಾತಿಯೇ? ಜ್ಞಾನವೇ? ಅಥವಾ ಧಾರ್ಮಿಕನೇ? ಇದರಲ್ಲಿ ಜೀವನೇ ಬ್ರಾಹ್ಮಣನೆಂದು ಹೇಳುವದಕ್ಕಾಗುವುದಿಲ್ಲ ಏಕೆಂದರೆ ಒಬ್ಬ ಜೀವನಿಗೆ ಹಿಂದೆ ಅನೇಕ ಶರೀರಗಳು ಸಂಭವಿಸಿರಬಹುದಲ್ಲದೆ ಮುಂದೆಯೂ ಅನೇಕ ಶರೀರಗಳು ಸಂಭವಿಸಬಹುದು. ಹೀಗೆ ಒಬ್ಬ ಜೀವನಿಗೆ ಕರ್ಮವಶದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ. ಗರ್ದಭ, ಕ್ರಿಮಿಕೀಟಾದಿ ಅನೇಕ ದೇಹಗಳು ಸಂಭವಿಸಿ ತದಂತರ್ಗತನಾದ ಜೀವನಿಗೆ ಎಲ್ಲಾ ಶರೀರಗಳಲ್ಲಿಯೂ ಬ್ರಾಹ್ಮಣನೆಂದೇ ವ್ಯವಹಾರವು ಬರಬೇಕಾಗುತ್ತದೆ. ಹಾಗೆ ಇಲ್ಲವಾದ್ದರಿಂದ ಜೀವನು ಬ್ರಾಹ್ಮಣನಾಗಲಾರನು ಎಂದು ಹೇಳಿ ಎಲ್ಲಾದಕ್ಕೂ ಬ್ರಾಹ್ಮಣತ್ವವನ್ನು ನಿರಾಕರಿಸಿ ಯಾವನು ಅದ್ವಿತೀಯನಾಗಿ ಜಾತಿಗುಣಕ್ರಿಯಾರಹಿತನಾಗಿ ಸತ್ಯಜ್ಞಾನಾನಂದಸ್ವರೂಪನಾದ ಆತ್ಮನನ್ನು ಸಾಕ್ಷಾತ್ಕರಿಸಿ, ಕಾಮಾದಿ ದೋಷರಹಿತನಾಗಿ ಶಮಾದಿಗುಣಸಂಪನ್ನನಾಗಿ ಮಾತ್ಸರ್ಯತೃಷ್ಣಾ ಮೋಹಾದಿರಹಿತನಾಗಿ, ಅಹಂಕಾರಾದಿಗಳಿಂದ ಸ್ಪರ್ಶವಾಗದ ಮನಸ್ಸುಳ್ಳವನಾಗಿರುವನೋ ಅವನೇ ಬ್ರಾಹ್ಮಣನು. ಆದ್ದರಿಂದ ಆತ್ಮನನ್ನು ಸಚ್ಚಿದಾನಂದಸ್ವರೂಪವಾದ ಬ್ರಹ್ಮನನ್ನಾಗಿ ಮಾಡಿಕೊಳ್ಳಬೇಕು ಎಂದು ಉಪನಿಷತ್ಸಮಾಪ್ತಿಯನ್ನು ಮಾಡಿದಾರೆ. ಇದರಿಂದ ಬ್ರಹ್ಮಜ್ಞಾನದಿಂದಲೇ ಬ್ರಾಹ್ಮಣ್ಯವೆಂದು ಹೇಳಿದಹಾಗಾಯಿತು. ಆದರೆ ಲೋಕದಲ್ಲಿ ಬ್ರಹ್ಮಜ್ಞಾನವುಳ್ಳವನು ದುರ್ಲಭನು. ಶಿಷ್ಟನಾಗಿ ಬ್ರಾಹ್ಮಣಕುಲಪ್ರಸೂತನಾಗಿ ವೇದಾಧ್ಯಯನ ಮಾಡಿ ಯಾಗಾದಿಗಳನ್ನು ಮಾಡಿದವನಿಗೂ ಕೂಡ ಬ್ರಹ್ಮಜ್ಞಾನವು ದುರ್ಲಭವಾಗಿರುವದು. ಕೊನೆಗೆ ಇಂಥಾವನಿಗೂ ಬ್ರಾಹ್ಮಣ್ಯವು ಇಲ್ಲದೆಹೋಗಿ ಈ ಲೋಕದಲ್ಲಿ ಬ್ರಾಹ್ಮಣರೇ ಇಲ್ಲವೆಂದು ಹೇಳಬೇಕಾಯಿತು. ಆದ್ದರಿಂದ ಈ ಉಪನಿಷದ್ವಾಕ್ಯವು " ವಜ್ರಸೂಚೀಂಪ್ರವಕ್ಷ್ಯಾಮಿಶಸ್ತ್ರಮಜ್ಞಾನಭೇದನಂ | ದೂಷಣಂ ಜ್ಞಾನಹೀನಾನಾಂಭೂಷಣಂ ಜ್ಞಾನಚ

ಕ್ಷ್ನಾಪಾಂ || ಎಂಬ ಉಪಕ್ರಮ, " ಸಚ್ಚಿದಾನಂದಮಾತ್ಮಾನಮದ್ವಿತೀಯಂ ಬ್ರಹ್ಮ ಭಾವಯೇತ್ " ಎಂಬ ಉಪಸಂಹಾರ. ಇವುಗಳನ್ನು ಪರಿಶೀಲಿಸಿದರೆ ಇದು ಬ್ರಹ್ಮಜ್ಞಾನದ ಪ್ರಶಂಸಾಪರವೆಂದೇ ಹೇಳಬೇಕಾಗುತ್ತದೆ. ಆದ್ದರಿಂದ ಇದು ಜನ್ಮತಃ ಪ್ರಾಪ್ತವಾಗುವ ವರ್ಣವ್ಯವಸ್ಥೆಯನ್ನು ಬಾಧಿಸುವದಿಲ್ಲ.

ವಿಶ್ವಾಮಿತ್ರನು ಕ್ಷತ್ರಿಯನಾಗಿದ್ದು ಬ್ರಾಹ್ಮಣನಾಗಿರುವುದರಿಂದ ಇದೇ ಜನ್ಮದಲ್ಲಿ ತಮ್ಮ ಗುಣಕರ್ಮಗಳಿಂದ ಬ್ರಾಹ್ಮಣನಾಗಬಹುದೆಂದು ಕೆಲವರು ಊಹಿಸುವರು. ವಿಚಾರಮಾಡಿದರೆ ಈ ಊಹೆಯು ಸಮಂಜಸವಲ್ಲವೆಂಬುವುದು ತಿಳಿಯಬರುವುದು. ವಿಶ್ವಾಮಿತ್ರನು ಎಷ್ಟೋ ಸಾವಿರ ವರ್ಷಗಳು ತಪಸ್ಸುಮಾಡಿ ಬ್ರಾಹ್ಮಣನಾದನೆಂದು ತಿಳಿಯಬರುತ್ತದೆ. ಅಷ್ಟು ವರ್ಷಗಳಲ್ಲಿ ಈಗಿನವರು ಬ್ರಾಹ್ಮಣರಾಗುವುದಾದರೆ ಜನ್ಮಾಂತರದಲ್ಲಿಯೇ ಬ್ರಾಹ್ಮಣ್ಯವು ದೊರಕಬೇಕು. ಪರ್ಯವಸಾನದಲ್ಲಿ ಈ ಜನ್ಮದಲ್ಲಿ ಬ್ರಾಹ್ಮಣ್ಯವಿಲ್ಲವೆಂತಲೇ ಸಿದ್ಧವಾಗುವದು. ಮತ್ತು ಬ್ರಾಹ್ಮಣ್ಯವು ಸುಲಭವಾಗಿ ದೊರಕುವುದಾಗಿದ್ದರೆ ವಿಶ್ವಾಮಿತ್ರರು ಅಷ್ಟು ವರ್ಷಗಳು ತಪಸ್ಸುಮಾಡಿ ಕಷ್ಟಪಡಬೇಕಾದ ಆವಶ್ಯಕತೆಯು ಇರಲಿಲ್ಲ. ಇದಲ್ಲದೆ ವಿಶ್ವಾಮಿತ್ರರ ವಿಷಯದಲ್ಲಿ ಮತ್ತೊಂದು ರಹಸ್ಯವುಂಟು. ವಿಶ್ವಾಮಿತ್ರನ ತಾಯಿಯು ತನ್ನ ಮಗಳಿಗೂ ತನಗೂ ಸಂತಾನಕ್ಕಾಗಿ ಗೊತ್ತುಮಾಡಿದ್ದ ಚರುಗಳನ್ನು ಬದಲಾಯಿಸಿಕೊಂಡು ಇಬ್ಬರೂ ಉಪಯೋಗಿಸಿದರೆಂತಲೂ ಮಗಳಿಗೋಸ್ಕರ ನಿರ್ದಿಷ್ಟವಾದ ಚರುವಿನಲ್ಲಿ ಬ್ರಾಹ್ಮಣತ್ವಾಪಾದಕವಾದ ಶಕ್ತಿಯು ನಿವಿಷ್ಟವಾಗಿತ್ತೆಂತಲೂ ಅದನ್ನು ಮಗಳು ಉಪಯೋಗಿಸಿಕೊಳ್ಳಬೇಕಾಗಿದ್ದರೂ ತಿಳಿಯದೆ ಯಾವದೋ ಒಂದು ಆಶೆಯಿಂದ ತಾನೇ ಉಪಯೋಗಿಸಿದಳೆಂತಲೂ ಅದರಿಂದ ವಿಶ್ವಾಮಿತ್ರರು ಹುಟ್ಟಿದರಂತಲೂ ಸ್ಪಷ್ಟವಾಗಿರುವುದು. ಜನ್ಮಪ್ರಾಪ್ತವಾದ ಕ್ಷತ್ರಿಯತ್ವವನ್ನು ನಿವೃತ್ತಿಮಾಡಿಕೊಳ್ಳುವದಕ್ಕಾಗಿ ಅವರು ಅಷ್ಟುಕಾಲ ತಪಸ್ಸುಮಾಡಬೇಕಾಗಿಬಂತು. ಇದರಿಂದಲೂ ಜನ್ಮಪ್ರಾಪ್ತವಾದ ಗುಣಕರ್ಮಗಳು ಪ್ರಬಲಗಳೆಂದೇ ಸ್ಪಷ್ಟಪಡುವದು. ವಿಶ್ವಾಮಿತ್ರರ ದೃಷ್ಟಾಂತದಿಂದ ಜನ್ಮವನ್ನನುಸರಿಸಿಯೇ ವರ್ಣವ್ಯವಸ್ಥೆಯು ಅಂಗೀಕರಿಸಲ್ಪಡುತ್ತಿತ್ತೆಂಬುವದೂ ಸಹಾ ಕಂಡುಬರುವದು. ವಿಶ್ವಾಮಿತ್ರರು ಗುರುಕುಲಕ್ಕೆ ಸೇರಿದಾಗಲೂ ಕ್ಷತ್ರಿಯರಾಗಿಯೇ ಇದ್ದರು. ವಿದ್ಯಾಸಮಾಪ್ತಿಯಾದನಂತರ ಗುರುಕುಲದಿಂದ ಹಿಂತಿರುಗಿದಾಗಲೂ ಕ್ಷತ್ರಿಯರಾಗಿಯೇ ಇದ್ದರು. ಬಹುಕಾಲ ರಾಜ್ಯಭಾರವನ್ನು ಮಾಡುತ್ತಿದ್ದಾಗಲೂ ಕ್ಷತ್ರಿಯರಾಗಿಯೇ

ಇದ್ದರು. ತಪಸ್ಸು ಮಾಡಿದಾಗಲೂ ಒಪುಕಾಂಡವರಿಗೆ ಕ್ಷತ್ರಿಯರಾಗಿಯೇ ಇದ್ದರು. ಎಷ್ಟೋ ವರ್ಷಗಳನಂತರ ಬ್ರಾಹ್ಮಣರಾದರೆಂದರೆ ವೃದ್ಧಾವಸ್ಥೆಯಲ್ಲಿ ವರ್ಣವನ್ನು ನಿಶ್ಚಯಿಸಬೇಕೇ ಹೇಗೆ?

ವರ್ಣವ್ಯವಸ್ಥೆಯನ್ನು ಮಾಡತಕ್ಕದ್ದು ಮನುಷ್ಯನ ಕೆಲಸವಲ್ಲ. ಮನುಷ್ಯನಿಗೆ ಅಷ್ಟು ಸಾಮರ್ಥ್ಯವು ಸಾಲದು. ಮನುಷ್ಯನು ಸರ್ವಜ್ಞನಲ್ಲ. ಮನುಷ್ಯನಿಗೆ ಭ್ರಮ ಪ್ರಮಾದಗಳು ತಪ್ಪಿದ್ದಲ್ಲ. ಮನುಷ್ಯನು ಸ್ವಾರ್ಥಕ್ಕೆ ವಶೀಭೂತನಾಗುವನು. ಆದುದರಿಂದ ಇದು ಪರಮಾತ್ಮನ ಕೆಲಸವೆಂದೇ ತಿಳಿಯಬೇಕು. ಪರಮಾತ್ಮನು ಜನ್ಮವೆತ್ತುವ ಜೀವಗತಗುಣಕರ್ಮಸ್ವಭಾವಗಳನ್ನು ಪರಿಶೀಲಿಸಿ ಆಯಾಯಾ ವರ್ಣಗಳಲ್ಲಿ ಜನಿಸುವಂತೆ ಮಾಡುವನು. ಆದುದರಿಂದಲೇ “ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ” ಎಂದು ಹೇಳಿರುವರು. ಪೂರ್ವಕಾಲದಲ್ಲಿ ರಾಜಾ, ಜನಕ, ರಾಮ, ಕೃಷ್ಣ, ಯುಧಿಷ್ಠಿರ ಮೊದಲಾದ ಕ್ಷತ್ರಿಯರೂ, ತುಲಾಧಾರನೇ ಮೊದಲಾದ ವೈಶ್ಯರೂ, ಧರ್ಮವ್ಯಾಧನೇ ಮೊದಲಾದ ಶೂದ್ರರೂ ಜ್ಞಾನಿಗಳಾಗಿಯೂ ಧರ್ಮಾತ್ಮರಾಗಿಯೂ ಸರ್ವಶಾಸ್ತ್ರಜ್ಞರಾಗಿಯೂ ಇದ್ದರು. ಇವರಲ್ಲಿ ಜ್ಞಾನಾರ್ಜನಕ್ಕಾಗಿ ಋಷಿಜನಗಳೂ ಸಹಾ ಹೋಗುತ್ತಿದ್ದರು. ಹಾಗಿದ್ದಾಗ್ಯೂ ಅವರನ್ನು ಬ್ರಾಹ್ಮಣರೆಂದು ಎಲ್ಲಿಯಾದರೂ ಹೇಳಿರುವರೇ? ಅಥವಾ ಅವರು ತಮ್ಮನ್ನು ಬ್ರಾಹ್ಮಣರೆಂದು ಎಲ್ಲಿಯಾದರೂ ಹೇಳಿಕೊಂಡಿರುವರೇ? ಎಲ್ಲಿಯೂ ಇಲ್ಲ. ಆದುದರಿಂದ ಜನ್ಮವನ್ನನುಸರಿಸಿಯೇ ವರ್ಣವ್ಯವಸ್ಥೆಯನ್ನು ಮಾಡಬೇಕೆಂಬುದೇ ಸಿದ್ಧವಾಗುತ್ತದೆ.

ಸಮುದಾಯಕ್ಕೆ ಎಲ್ಲರೂ ಬೇಕು. ಮನುಷ್ಯ ಸಮಾಜದಲ್ಲಿ ಎಲ್ಲರಿಗೂ ಒಂದೇ ವಿಧವಾದ ಸನ್ಮಾನವು ಉಂಟು. ತಮ್ಮ ತಮ್ಮ ವರ್ಣದಲ್ಲಿದ್ದುಕೊಂಡು ಸರ್ವರೂ ದೇಶಾಭ್ಯುದಯವನ್ನು ಉಂಟುಮಾಡಬಲ್ಲರು. ಹೀಗಿರುವಾಗ ಇದಕ್ಕೆ ವಿರುದ್ಧವಾಗಿ ಹೊಸಕ್ರಮವನ್ನಾರಂಭಿಸಿ ಸಮಾಜವಿಪ್ಲವವನ್ನು ಉಂಟುಮಾಡುವುದರಲ್ಲಿ ಲಾಭವೇನೋ ತಿಳಿಯಲಿಲ್ಲ. ಇದರ ಮೇಲೆ ನಾವು ಜನ್ಮಾಂತರವನ್ನು ಒಪ್ಪತಕ್ಕವರಾಗಿದೇವೆ. ಧಾರ್ಮಿಕನಾದ ಶೂದ್ರನು ಮತ್ತೊಂದು ಜನ್ಮದಲ್ಲಿ ಬ್ರಾಹ್ಮಣನಾಗುವನು. ಪಾಪಿಷ್ಠನಾದ ಬ್ರಾಹ್ಮಣನು ಶೂದ್ರನಾಗುವನು. ತಮ್ಮ ತಮ್ಮ ಕರ್ಮಗಳಿಂದಲೇ ಬ್ರಾಹ್ಮಣರಲ್ಲಿಯೂ ವೈಶ್ಯರಲ್ಲಿಯೂ ಶೂದ್ರರಲ್ಲಿಯೂ ಜನಿಸುವರು. ಹಾಗೆಯೇ ಉತ್ತಮ ವಂಶದ

ಲ್ಲಿಯೂ ಜನಿಸುವರು. ಆತುರಪಟ್ಟು ಇದೇ ಜನ್ಮದಲ್ಲಿಯೇ ವಿಶ್ವಾಮಿತ್ರರಂತೆ ಉತ್ತಮ ವರ್ಣದವರಾಗಬೇಕೆಂದು ಅಕ್ಷೇಪಿಸುವುನಾದರೆ ವಿಶ್ವಾಮಿತ್ರರು ಎಷ್ಟು ವರ್ಷಗಳಲ್ಲಿ ಬ್ರಾಹ್ಮಣರಾದರೋ ಅಷ್ಟು ವರ್ಷಗಳಲ್ಲಿ ನಮಗೆ ಎಷ್ಟು ಜನ್ಮಗಳೋ ಕಳೆದುಹೋಗುವವು. ಈ ಆತುರವೂ ಸಹಾ ಜನ್ಮಾಂತರದಲ್ಲಿಯೇ ಪರ್ಯವಸಿತವಾಗುವದು. ವಸ್ತುತಃ ವಿಚಾರಮಾಡಿ ನೋಡಿದರ ಈ ವಿಧವಾದ ವರ್ಣವ್ಯವಸ್ಥೆಯೂ ಪುನರ್ಜನ್ಮ ಸಿದ್ಧಾಂತವೂ ಇದುವರೆಗೂ ಹಿಂದೂ ಸಮಾಜದಲ್ಲಿ ಶಾಂತಿಸ್ಥಾಪನೆಯನ್ನು ಮಾಡಿದ್ದುವೆಂದು ಖಂಡಿತವಾಗಿಯೂ ತಿಳಿದುಬರುವುದು. ಈ ಸಿದ್ಧಾಂತವನ್ನು ಹಿಂದೂ ಸಮಾಜವು ಮರೆತುಬಿಡುವುದಾದರೆ ಆ ದಿವಸವೇ ಹಿಂದೂ ಜನಗಳ ಧರ್ಮಸಂಪತ್ತೆಲ್ಲವೂ ನಷ್ಟವಾಗಿ ಅಶಾಂತಿಗೆ ಸ್ಥಾನವಾಗುವದು. ಆದುದರಿಂದ ಸರ್ವರೂ ದಯವಿಟ್ಟು ಇದನ್ನು ಆ ಮೂಲಾಗ್ರವಾಗಿ ಓದಿನೋಡಿ ನಿಷ್ಪಕ್ಷಪಾತ ಬುದ್ಧಿಯಿಂದ ಪರ್ಯಾಲೋಚಿಸಿ, ದೇಶೋದ್ಧಾರದಲ್ಲಿ ಕಟಿಬದ್ಧರಾಗಬೇಕೆಂದು ಪ್ರಾರ್ಥಿಸುತ್ತೇನೆ.



# ನಮ್ಮಲ್ಲಿ ದೊರೆಯುವ ಪುಸ್ತಕಗಳು

——:0:——

1. ಸಂಕಲ್ಪಸೂರ್ಯೋದಯ ನಾಟಕ
   ಸಂಸ್ಕೃತದ ಕನ್ನಡ ಭಾಷಾನುವಾದ
   ಅತ್ಯುತ್ತಮವಾದ ವೇದಾಂತ ನಾಟಕ — 2-8-0
2. ಪ್ರಬೋಧ ಚಂದ್ರೋದಯ
   ಅದ್ವೈತ ವೇದಾಂತ ನಾಟಕ — 0-8-0
3. ಸಂಸಾರಸಾರ ನಾಟಕ — 0-5-0
4. ಸರ್ವಮತ ಭಾವದೀಪ — 0-1-0
5. ಶ್ರೀಮದ್ವೇದಾಂತಾಚಾರ್ಯರ ಚರಿತ್ರೆ — 0-3-0
6. ವರ್ಣವ್ಯವಸ್ಥೆ — 0-2-0



ವ್ಯಾಕರಣ ವಿದ್ವಾನ್ ಎಂ. ಕೆ. ಶ್ರೀನಿವಾಸರಾಘವಾಚಾರ್ಯ
ಡೋರ್ ನಂ. 10
ಸುನಾರ್ ವೀಧಿ, ಚಾಮರಾಜಮೊಹಲ್ಲಾ, ಮೈಸೂರು.